KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಜನವರಿ ೧೧, ೨೦೦೭ (ಪುಷ್ಯ ೨೧, ಶಕ ವರ್ಷ ೧೯೨೮) | ಸಂಚಿಕೆ ೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಗಂಗಪ್ಪ ಪಿಎಸ್‌ಐ, ಪಾವಗಡ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ - ಆದೇಶ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಪನ್ಸಿ/ಡಿಇ/38/ 2000-01, ಓಬಿ/ಸಂಖ್ಯೆ:121/2001-02, ದಿನಾಂಕ: 01.09.2001.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/1/43/ 2001-02, ದಿನಾಂಕ:02-08-2002.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08-11-2002.

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/73/2002-03, ದಿನಾಂಕ:00-04-2003.

5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/100/CNS /06, ದಿನಾಂಕ:18-10-2006.

**ಪ್ರಸ್ತಾವನೆ:**

ಶ್ರೀ ಗಂಗಪ್ಪ, ಪಿಎಸ್‌ಐ, ಪಾವಗಡ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1. ಶ್ರೀಮತಿ ನಾಗರತ್ನ ಕೋಂ ಉಮೇಶ ರವರು, ದಿನಾಂಕ:23-12-99ರಂದು ರಾತ್ರಿ ವಿಷ ಸೇವಿಸಿ ತಿಪಟೂರಿನ ಜನರಲ್ ಆಸ್ಪತ್ರೆಗೆ ದಾಖಲಾಗಿದ್ದು, ಅವರ ಹೇಳಿಕೆ ಪಡೆಯುವಂತೆ ತಿಪಟೂರಿನ ವೈರಲೆಸ್ ಕಂಟ್ರೋಲ್ ರೂಂನಿಂದ ನಿಮಗೆ ತಿಳಿಸಿದ್ದಾಗ್ಯೂ ಸಹ ನೀವು ತಿಪಟೂರಿನ ಜನರಲ್ ಆಸ್ಪತ್ರೆಗೆ ಭೇಟಿ ನೀಡಿ ಅವರ ಹೇಳಿಕೆ ಪಡೆಯದೇ ಕರ್ತವ್ಯ ನಿರ್ಲಕ್ಷತೆ ತೋರಿರುವುದು."

"2. ವಿಷ ಸೇವಿಸಿ ಮೃತಳಾದ ಶ್ರೀಮತಿ ನಾಗರತ್ನ ರವರ ಸಾವಿಗೆ ನೊಣವಿನಕೆರೆಯ ಠಾಣೆಯ ಪಿಸಿ-626 ರಂಗನಾಥ ಇವರು ಕಾರಣ ಎಂದು ಗೊತ್ತಿದ್ದರೂ ಸಹ ಅವರನ್ನು ಹಿಡಿದು ಠಾಣೆಯಲ್ಲಿ ಕೂರಿಸದೇ ಅವರು ಪರಾರಿಯಾಗಲು ಕಾರಣವಾಗಿರುವುದು."

"3. ಈ ಕಾರಣದಿಂದ ನೊಣವಿನಕೆರೆ ಮತ್ತು ಸುತ್ತಮುತ್ತಲ ಗ್ರಾಮಸ್ಥರು ಹಾಗೂ ಮೃತಳ ಸಂಬಂಧಿಕರು ನೊಣವಿನಕೆರೆ ಠಾಣೆಯ ಮುಂದೆ ಧರಣಿ ನಡೆಸಲು ಅವಕಾಶ ಮಾಡಿಕೊಟ್ಟು ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುವುದು."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 01.09.2001ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿಎಸ್ಐ ವೇತನದ ಕನಿಷ್ಟ ಮಟ್ಟಕ್ಕೆ ಇಳಿಸಿ, ಮುಂದಿನ ವೇತನ ಬಡ್ತಿಗಳನ್ನು ಮುಂದಿನ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಒಂದು ವರ್ಷಕಾಲ ಮುಂದೂಡಿ, ಒಂದು ವರ್ಷದ ನಂತರ ಪಿಎಸ್ಐ ಹುದ್ದೆಯ ಕನಿಷ್ಟ ವೇತನ ಶ್ರೇಣಿಯಲ್ಲಿ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಸಂಪಾದಿಸತಕ್ಕದೆಂದೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:02-08-2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುತ್ತದೆ. ನ್ಯಾಯಾಲಯದಲ್ಲಿ ಆರೋಪ ಸಾಬೀತಾಗದೆ, ಪ್ರಕರಣವು ಖುಲಾಸೆಯಲ್ಲಿ ಮುಕ್ತಾಯ ಗೊಂಡಿರುತ್ತದೆ. ಅರ್ಜಿದಾರರ ಮೇಲಿನ ಆರೋಪವು ತುಂಬಾ ಗಂಭೀರವಾಗಿದ್ದು, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆ ಸಮಂಜಸವಾಗಿದ್ದರೂ, ಕೆಸಿಎಸ್‌ಆರ್‌ನ ನಿಯಮ 59 ರನ್ವಯ ಅನಿರ್ದಿಷ್ಟ ಕಾಲದವರೆಗೆ ಕನಿಷ್ಟ ಮಟ್ಟಕ್ಕೆ ಇಳಿಸಲು ಅವಕಾಶವಿರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯ ದಿ:01-09-2001ರ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಅರ್ಜಿದಾರರ ವೇತನವನ್ನು ಪಿಎಸ್ಐ ಹುದ್ದೆಯ ಕನಿಷ್ಟ ವೇತನಕ್ಕೆ ಹತ್ತು (10) ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ, ಹತ್ತು ವರ್ಷಗಳ ದಂಡನಾ ಅವಧಿ ಮುಗಿದ ನಂತರ ದಂಡನಾದೇಶದ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನ ಹಂತದಿಂದ ವಾರ್ಷಿಕ ವೇತನ ಬಡ್ತಿ ಗಳಿಸುವ ದಂಡನೆ ವಿಧಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:18-10-2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 258 ಪೊಸಿಅ 2002 ಬೆಂಗಳೂರು, ದಿನಾಂಕ:7ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:01-09-2001ರ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಗಂಗಪ್ಪ, ಪಿಎಸ್ಐ ಪಾವಗಡ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:08-11-2002ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಇವರ ವೇತನವನ್ನು ಪಿಎಸ್ಐ ಹುದ್ದೆಯ ಕನಿಷ್ಟ ವೇತನಕ್ಕೆ ಹತ್ತು ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿಗಳಿಸದೇ, ಹತ್ತು ವರ್ಷಗಳ ದಂಡನಾ ಅವಧಿ ಮುಗಿದ ನಂತರ, ದಂಡನಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನ ಹಂತದಿಂದ ವಾರ್ಷಿಕ ವೇತನ ಬಡ್ತಿಗಳಿಸುವ ದಂಡನೆ ವಿಧಿಸಲಾಗಿದೆ. ಉಳಿದಂತೆ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:18-10-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1627

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಂಜೀವಪ್ಪ, ಪಿಸಿ, ಇವರ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಡಿಇ/23/99/ ಡಿಓಬಿ ಸಂಖ್ಯೆ:2340/2002 ದಿನಾಂಕ:21-12-2002.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/14/ಈವ/2005, ಆಮ ಸಂಖ್ಯೆ:303/ಈವ/2005, ದಿನಾಂಕ: 19.07.2005.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12-07--2005.

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/102/2005, ದಿನಾಂಕ:31-12-2005.

5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/55/CNS/2006, ದಿನಾಂಕ:11-09-2006

**ಪ್ರಸ್ತಾವನೆ:**

ಶ್ರೀ ಸಂಜೀವಪ್ಪ, ಸಿಪಿಸಿ-1376, ಜೇವರ್ಗಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ಸಂಜೀವಪ್ಪ, ಸಿಪಿಸಿ-1376, ಜೇವರ್ಗಿ ಪೊಲೀಸ್ ಠಾಣೆ, ಆದ ನೀವು ದಿನಾಂಕ:28-01-1999 ರಿಂದ ಕರ್ತವ್ಯದ ಮೇಲೆ ಹಿರಿಯ ಅಧಿಕಾರಿಗಳಲ್ಲಿ ಯಾವ ಮಾಹಿತಿಯನ್ನು ನೀಡದೇ ಅನಧಿಕೃತವಾಗಿ ಗೈರುಹಾಜರಿ ಉಳಿದುಕೊಂಡಿರುವಿರಿ. 21 ದಿನಗಳ ಮೇಲ್ಪಟ್ಟು ಅನಧಿಕೃತ ಗೈರುಹಾಜರಿ ಉಳಿದುಕೊಂಡ ಮೇರೆಗೆ, ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ರವರು ನಿಮ್ಮನ್ನು ಪಲಾಯತರೆಂದು ಪರಿಗಣಿಸಿ, ಪತ್ರ ದಿನಾಂಕ:11-03-1999ರ ಮೂಲಕ ಪಲಾಯನ ಪತ್ರ ಹೊರಡಿಸಿ, ಪಲಾಯನಾ ಪತ್ರ ಮುಟ್ಟಿದ 30 ದಿನಗಳ ಒಳಾಗಾಗಿ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ರವರ ಕಚೇರಿಗೆ ವರದಿ ಮಾಡಿಕೊಳ್ಳುವಂತೆ ಆದೇಶಿಸಿರುತ್ತಾರೆ. ಪಲಾಯನ ಪತ್ರ ನೀವು ಸ್ವೀಕರಿಸಿದ ಮೇಲೂ, 30 ದಿನಗಳ ಒಳಗಾಗಿ ವರದಿ ಮಾಡಿಕೊಳ್ಳದೆ, ನಿಮ್ಮ ಕರ್ತವ್ಯದಲ್ಲಿ ಅತೀವ ಕರ್ತವ್ಯ ವಿಮುಖತೆ ಪ್ರದರ್ಶಿಸಿ, ಹಿರಿಯ ಮೇಲಾಧಿಕಾರಿಗಳ ನ್ಯಾಯ ಬದ್ಧ ಆದೇಶಗಳನ್ನು ಉಲ್ಲಂಘನೆ ಮಾಡಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:21-12-2002ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ, ಗೈರುಹಾಜರಿ ಅವಧಿಯನ್ನು ಸಂಬಳ ರಹಿತ ರಜೆ ಎಂದು ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:19-07-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಮನೆಯಲ್ಲಿನ ಒಳ ಜಗಳದಿಂದಾಗಿ ಹೊಡೆದಾಡಿ, ತಮ್ಮ ಬೆರಳನ್ನು ಕಳೆದುಕೊಂಡಿದ್ದು, ಈ ಸಂಬಂಧ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಿರುವುದು ಕಂಡುಬರುತ್ತದೆ. ಹೀಗಾಗಿ ಅರ್ಜಿದಾರರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಆಗಿರುವುದು ಕಂಡುಬರುತ್ತಿದೆ. 1981 ರಿಂದ 1999 ರವರೆಗೆ 19 ವರ್ಷಗಳ ಸೇವೆ ಸಲ್ಲಿಸಿದ್ದು, ಸರ್ಕಾರಿ ಸುತ್ತೋಲೆ ದಿನಾಂಕ:14-09-2001ರನ್ವಯ 4 ತಿಂಗಳಿಗಿಂತ ಮೇಲ್ಪಟ್ಟ ಅನಧಿಕೃತ ಗೈರುಹಾಜರಿಗೆ ಸೇವೆಯಿಂದ ತೆಗೆದುಹಾಕುವ ದಂಡನೆ ವಿಧಿಸಬಹುದಾಗಿದ್ದರೂ, ಅರ್ಜಿದಾರರ ಕುಟುಂಬ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ ಇವರು 19 ವರ್ಷಗಳ ಸೇವೆ ಸಲ್ಲಿಸಿರುವುದನ್ನು ಪರಿಗಣಿಸಿ, ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, ಅರ್ಜಿದಾರರನ್ನು `ಕಡ್ಡಾಯ ನಿವೃತ್ತಿ`ಗೊಳಿಸಲು ಸರ್ಕಾರ ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:11-09-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 117 ಪೊಸಿಅ 2006 ಬೆಂಗಳೂರು, ದಿನಾಂಕ:-2ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:21-12-2002ರ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ರವರ ಆದೇಶವನ್ನು ರದ್ದುಪಡಿಸಿ, ಶ್ರೀ ಸಂಜೀವಪ್ಪ, ಪಿಸಿ-1376, ಆಳಂದ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:12-07-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಅರ್ಜಿದಾರರನ್ನು `ಕಡ್ಡಾಯ ನಿವೃತ್ತಿಗೊಳಿಸಿದೆ`.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/55/CNS/2006, ದಿನಾಂಕ:11-09-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1595

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಅಬ್ದುಲ್ ರಹೀಮ ಎಹೆಚ್‌ಸಿ-07, ರಾಯಚೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು - ಆದೇಶ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ/3/ಪಿಆರ್/90/04 ಆಪು ಸಂಖ್ಯೆ: 736/2004, ದಿನಾಂಕ:10-12-2004.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/17/ಈವ/2005, ಆಪು ಸಂಖ್ಯೆ:168/ಈವ/2005/1703 ದಿನಾಂಕ:06-04-2005.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:21-12-2005

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/12/2006, ದಿನಾಂಕ:18-03-2006.

5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/94/CNS/ 2006, ದಿನಾಂಕ:06-10 2006.

**ಪ್ರಸ್ತಾವನೆ:**

ಶ್ರೀ ಅಬ್ದುಲ್ ರಹೀಮ್ ಎಹೆಚ್‌ಸಿ-07, ರಾಯಚೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ಶ್ರೀ ಅಬ್ದುಲ್ ರಹೀಮ್ ರವರೇ ಎ.ಎಚ್.ಸಿ.-07, ಅಂತಾ ಮೋಟಾರ ವಾಹನ ವಿಭಾಗದಲ್ಲಿ ಕರ್ತವ್ಯನಿರ್ವಹಿಸುತ್ತಿರುವಿರಿ. ದಿನಾಂಕ:23-05-2004 ರಿಂದ 3 ದಿನಗಳು ಕಿರುಕುಳ ರಜೆಯ ಮೇಲೆ ಹೋಗಿದ್ದು, ದಿನಾಂಕ:26-05-2004ರಂದು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳ ಬೇಕಾಗಿತ್ತು. ಆದರೆ ನೀವು ದಿನಾಂಕ:26-05-2004 ರಿಂದ 31-05-2004 ರವರೆಗೆ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿದ್ದು, ನಂತರ ವೈದ್ಯಕೀಯ ಆಧಾರದ ಮೇಲೆ ರಜೆ ಮಂಜೂರಾತಿ ಕುರಿತು ಅರ್ಜಿ ಸಲ್ಲಿಸಿದ್ದು ಇರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:10-12-2004ರ ಆದೇಶದಲ್ಲಿ ಅರ್ಜಿದಾರರು ಅನಧೀಕೃತವಾಗಿ ಗೈರುಹಾಜರಾದ ಅವಧಿ ದಿನಾಂಕ:23-05-2004 ರಿಂದ 31-05-2004 ರವರೆಗೆ ನಿಯಮ 106 (ಎ) ಕೆಸಿಎಸ್‌ಆರ್ ಪ್ರಕಾರ ವೇತನ ರಹಿತ ರಜೆ ಎಂದು ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:06-04-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಿನಾಂಕ:23-05-2004 ರಿಂದ 25-05-2004 ರವರೆಗೆ ಆಕಸ್ಮಿಕ ರಜೆ ಮಂಜೂರಾತಿ ಪಡೆದು ರಜೆಯ ಮೇಲೆ ತೆರಳಿದ್ದು, ಅನಾರೋಗ್ಯ ನಿಮಿತ್ತ ದಿನಾಂಕ: 26.05.2004 ರಿಂದ 31-05-2004 ರವರೆಗೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಅನಿವಾರ್ಯ ಕಾರಣಗಳಿಂದ ಅಂದರೆ ಅನಾರೋಗ್ಯ ನಿಮಿತ್ತ 5 ದಿವಸಗಳು ಅನಧಿಕೃತ ಗೈರುಹಾಜರಾಗಿರುವುದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶವನ್ನು ರದ್ದುಪಡಿಸಿ ದಿನಾಂಕ:23-05-2004 ರಿಂದ 25-05-2004 ರವರೆಗೆ ಆಕಸ್ಮಿಕ ರಜೆ ಎಂದೂ ದಿನಾಂಕ:26-05-2004 ರಿಂದ 31.05.2004 ರವರೆಗಿನ ದಿವಸಗಳನ್ನು ಅವರ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:06-10-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 277 ಪೊಸಿಅ 2006 ಬೆಂಗಳೂರು, ದಿನಾಂಕ:28ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:10-12-2004ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ರದ್ದುಪಡಿಸಿ, ಶ್ರೀ ಅಬ್ದುಲ್ ರಹೀಮ್, ಎಹೆಚ್‌ಸಿ-07 ಡಿಎಆರ್ ರಾಯಚೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:21.12.2005ರ

ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ದಿನಾಂಕ:23-05-2004 ರಿಂದ 25-05-2004 ರವರೆಗೆ `ಆಕಸ್ಮಿಕ ರಜೆ` ಎಂದೂ ದಿನಾಂಕ:26-05-2004 ರಿಂದ 31-05-2004 ರವರೆಗಿನ ದಿನಗಳನ್ನು ಅವರ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸಲಾಗಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/94/CNS/06, ದಿನಾಂಕ:06-10-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1596

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಎಸ್.ಉಗಾರೆ, ಸಿಪಿಸಿ-2383, ಮೂಡಲಗಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತ - ಆದೇಶ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-2/ಇವಿ/19/2004, ಆಪು ಸಂಖ್ಯೆ: 198/2005, ದಿನಾಂಕ:23-03-2005.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/31/ಉವ/2005, ದಿನಾಂಕ:03-10-2005.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-12--2005.

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು /2/5//2006, ದಿನಾಂಕ:15-03-2006.

**ಪ್ರಸ್ತಾವನೆ:**

ಶ್ರೀ ಎಂ.ಎಸ್.ಉಗಾರೆ, ಸಿಪಿಸಿ-2383, ಮೂಡಲಗಿ ಪೊಲೀಸ್ ಠಾಣೆ, (ಮಾರ್ಕೆಟ್ ಪೊಲೀಸ್ ಠಾಣೆ) ಗೋಕಾಕ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ದಿನಾಂಕ:06-12-2003ರಂದು ರಾತ್ರಿ 10-30ಗಂಟೆಯ ಸುಮಾರಿಗೆ ಬಸ್ ನಿಲ್ದಾಣದಿಂದ ವೇಶ್ಯಾಗಾರ್ತಿಯಾದ ರೇಣುಕಾ ಖಾನಾಪೂರೆ ಇವಳನ್ನು ಮಾರ್ಕೆಟ್ ಪೊಲೀಸ್ ಠಾಣೆಗೆ ಕರೆದುಕೊಂಡು ಬಂದಿದ್ದು, ಅವಳನ್ನು ಮಹಿಳಾ ಸ್ವೀಕಾರ ಕೇಂದ್ರಕ್ಕೆ ಕಳುಹಿಸುವ ಕುರಿತು SHO ಕರ್ತವ್ಯದಲ್ಲಿದ್ದ CHC 932 ಆರ್.ಎಸ್.ಗೋವಿನಕೊಪ್ಪ ಅವರು ಯಾದಿ ಬರೆದುಕೊಂಡು ಬರುವಷ್ಟರಲ್ಲಿ, ಆರೋಪಿತ ಪೊಲೀಸ್ ಅಧಿಕಾರಿ ಸಿಪಿಸಿ-2383 ಎಂ.ಎಸ್.ಉಗಾರೆ, ರವರಾದ ನೀವು ರೇಣುಕಾ ಖಾನಾಪೂರೆ ಇವಳನ್ನು ಇಂಟ್ರಾಗೇಷನ್ ರೂಮ್‌ದಲ್ಲಿ ಕರೆದುಕೊಂಡು ಹೋಗಿ ಜಬರಿ ಸಂಭೋಗ ಮಾಡಿ, ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:23-03-2005ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಸಿಪಿಸಿ ಹುದ್ದೆಯ ಕನಿಷ್ಟ ಮೂಲ ವೇತನಕ್ಕೆ ಇಳಿಸಿ, ಹೊಸದಾಗಿ ವಾರ್ಷಿಕ ವೇತನ ಬಡ್ತಿ ಗಳಿಸಲು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:03-10-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ಠಾಣೆಯಲ್ಲೇ ಅತ್ಯಾಚಾರ ಎಸಗಿರುವುದು, ಇವರು ಕರ್ತವ್ಯದಲ್ಲಿ ಘೋರ ದುರ್ನಡತೆ

ಎಸಗಿರುವುದಕ್ಕೆ ಸಾಕ್ಷಿ ಆಗಿರುತ್ತದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 367 ಪೊಸೆಅ 2006 ಬೆಂಗಳೂರು, ದಿನಾಂಕ:2ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಸ್.ಉಗಾರೆ, ಸಿಪಿಸಿ-2383 ಮೂಡಲಗಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ:10-12-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1598

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವಿಜಯಕುಮಾರ್, ಸಿಹೆಚ್‌ಸಿ-546, ಬೀದರ್ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ, ಬೀದರ್ ಇವರ ಆದೇಶ ಸಂಖ್ಯೆ:20/ಡಿಇ/ಬೀ/2001 ಆಪು ಸಂಖ್ಯೆ: 499/2003, ದಿನಾಂಕ:29-10-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/109/ಈವ/2003, ಆಪು ಸಂಖ್ಯೆ:561/ಈವ/2003, ದಿನಾಂಕ:24-07-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:31-10-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/ 142/2005, ದಿನಾಂಕ:23-03-2006.

**ಪ್ರಸ್ತಾವನೆ:**

ಶ್ರೀ ವಿಜಯಕುಮಾರ್, ಸಿಹೆಚ್‌ಸಿ-546, ಬೀದರ್ ಗ್ರಾಮೀಣ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಬೀದರ್ ಗ್ರಾಮೀಣ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ:22/2000 (CC NO.1214/2000)ರಲ್ಲಿ ಪ್ರಥಮ ತನಿಖಾಧಿಕಾರಿ ಇದ್ದು, ತಾನು ದಾಖಲಿಸಿಕೊಂಡ ದಾಖಲೆಗಳ ವಿರುದ್ಧ ಹೆಚ್ಚುವರಿ ಪ್ರಥಮ ದರ್ಜೆಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ ಬೀದರ್‌ನಲ್ಲಿ ದಿನಾಂಕ:02-07-2001ರಂದು ತಾನು ಬರೆದುಕೊಂಡ ದಾಖಲೆಗಳ ವಿರುದ್ಧ ಉದ್ದೇಶ ಪೂರ್ವಕವಾಗಿ ನಕರಾತ್ಮಕವಾಗಿ ಸಾಕ್ಷಿ ನೀಡಿದ್ದರಿಂದ, ದಿನಾಂಕ:24-07-2001ರಂದು ತಾನು ಬರೆದುಕೊಂಡ ದಾಖಲೆಗಳ ವಿರುದ್ಧ ಉದ್ದೇಶ ಪೂರ್ವಕವಾಗಿ ಸಾಕ್ಷಿ ನೀಡಿದ್ದರಿಂದ, ದಿನಾಂಕ:24-07-2001ರಂದು ಕಲಂ 255(1) Crpc ಅಡಿಯಲ್ಲಿ, ಆರೋಪಿ ನಿರ್ದೋಷಿ ಎಂದು ಬಿಡುಗಡೆ ಹೊಂದಲು ಸಹಕರಿಸಿ, ಕರ್ತವ್ಯದ ಗಂಭೀರ ಲೋಪ ಮಾಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29-10-2003ರ ಆದೇಶದಲ್ಲಿ ಅರ್ಜಿದಾರರ ಸದ್ಯದ ಮೂಲ ವೇತನವನ್ನು ಪ್ರಸಕ್ತ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನಕ್ಕೆ ಐದು ವರ್ಷಗಳ ತನಕ ಇಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರ ಸೇವಾ ಹಿರಿಮೆಯನ್ನು ಗಮನದಲ್ಲಿರಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 24.07.2004ರ ಆದೇಶದಲ್ಲಿ ಶಿಸ್ತುಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು

ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮಾಡಿ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆ ಸಮಂಜಸವಾಗಿದ್ದರೂ, ಮೇಲ್ಮನವಿ ಪ್ರಾಧಿಕಾರಿಯು ಮಾನವೀಯ ದೃಷ್ಟಿಯಿಂದ ಈ ಆದೇಶವನ್ನು ಮಾರ್ಪಡಿಸಿ, ದಂಡನೆಯನ್ನು ಕಡಿಮೆ ಮಾಡಿರುತ್ತಾರೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 374 ಪೊಸಿಅ 2006 ಬೆಂಗಳೂರು, ದಿನಾಂಕ:31ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿಜಯಕುಮಾರ್, ಸಿಹೆಚ್‌ಸಿ-546, ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ:31-10-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1599

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಹಲಗಯ್ಯ, ನಿವೃತ್ತ ಪಿಎಸ್‌ಐ, ಮಂಡ್ಯ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ಇವರ ಆದೇಶ ದಿನಾಂಕ: 25.08.2001, 01-02-2002, 01-02-2003, 06-07-2002 ಹಾಗೂ ಸಂಖ್ಯೆ:ಸಿಬ್ಬಂದಿ-2/ಪಿಆರ್-70/2002-03, ಓಬಿ ಸಂಖ್ಯೆ:56/2003-04, ದಿನಾಂಕ:19-05-2003.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/17/2004-05, ದಿನಾಂಕ:24-05-2005.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:14-10-2005.

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/134/2005, ದಿನಾಂಕ:02-02-2006.

**ಪ್ರಸ್ತಾವನೆ:**

ಶ್ರೀ ಹಲಗಯ್ಯ, ನಿವೃತ್ತ ಪಿಎಸ್‌ಐ ಮಂಡ್ಯ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

''1) ದಿನಾಂಕ:22-05-2001 ರಂದು ಕರ್ತವ್ಯ ನಿರ್ಲಕ್ಷತೆ, ತೋರಿರುವುದು, ಅವಿಧೇಯತೆ ತೋರಿರುವುದು."

2) "ದಿನಾಂಕ:16-04-2001 ರಿಂದ 17-04-2001ರವರೆಗೆ ಅಪರಾಧ ವಿಭಾಗದ 61 ಪ್ರಕರಣಗಳನ್ನು ತನಿಖೆ ನಡೆಸಿ ನ್ಯಾಯಾಲಯಕ್ಕೆ ಕಳುಹಿಸಲು ಸೂಚಿಸಿದ್ದರೂ ಬಾಕಿ ಇಟ್ಟಿರುವ ಬಗ್ಗೆ ಹಾಗೂ ನ್ಯಾಯಾಲಯಕ್ಕೆ ಸಲ್ಲಿಸಲು ವಿಫಲರಾಗಿರುವುದು "

3) "ದಿನಾಂಕ:03-11-2001ರಂದು ಠಾಣೆಯಲ್ಲಿ ಯಾರಿಗೂ ಹೇಳದೆ ಎಲ್ಲಿಗೋ ತೆರಳಿದ್ದು, ಅಂದು ರಾತ್ರಿ ಅಲ್ಲಿ ಕೊಲೆಯೊಂದು ನಡೆದಿದ್ದು, ಸಿಬ್ಬಂದಿ ತಮಗೆ ತಿಳಿಸಿದರೂ ಸ್ಥಳಕ್ಕೆ ಹೋಗದೇ ಅವಿಧೇಯತೆ, ಬೇಜವಾಬ್ದಾರಿತನ ತೋರಿದ್ದು."

4) "ದಿನಾಂಕ:24-09-2001 ರಂದು ಪ್ರಕರಣ ಸಂ.199/01 ರಲ್ಲಿ ತನಿಖೆ ಬಗ್ಗೆ ಕ್ರಮ ಕೈಗೊಂಡು ಮಾಹಿತಿ ಸಂಗ್ರಹಿಸಲು ಸೂಚಿಸಿದ್ದರೂ, ಕರ್ತವ್ಯದಲ್ಲಿ ಬೇಜವಾಬ್ದಾರಿತನ ತೋರಿಸಿ, ಮೇಲಾಧಿಕಾರಿಗಳ ನಿರ್ದೇಶನವನ್ನು ಪಾಲಿಸುವಲ್ಲಿ ವಿಫಲರಾಗಿರುವುದು."

5) "ಮಾಸಿಕ ಅಪರಾಧ ಸಭೆಗಳಲ್ಲಿ ಕಳವು ಪ್ರಕರಣ ಇತ್ಯಾದಿಗಳ ಬಗ್ಗೆ ಅಂತಿಮ ವರದಿ ಸಲ್ಲಿಸಿ, ಪ್ರಕರಣಗಳನ್ನು ಇತ್ಯರ್ಥಪಡಿಸಲು ಸೂಚಿಸಿದ್ದರೂ, ದಿನಾಂಕ:09-07-2002 ರಿಂದ 01-09-2002ರವರೆಗೆ ಅನುಮತಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಆಗಿರುವುದು."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಕೇಳಿದ್ದು, ಅರ್ಜಿದಾರರು ಸಮಜಾಯಿಷಿ ನೀಡದ ಕಾರಣ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ 1) ದಿನಾಂಕ: 25.08.2001ರ ಆದೇಶದಲ್ಲಿ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ತಿಂಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ;

2) ದಿನಾಂಕ:01-02-2002ರ ಆದೇಶದಲ್ಲಿ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ;

3) ದಿನಾಂಕ:01-02-2002ರ ಆದೇಶದಲ್ಲಿ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ;

4) ದಿನಾಂಕ:06-07-2002ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 2 ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ಹಾಗೂ

5) ದಿನಾಂಕ:19-05-2003ರ ಆದೇಶದಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು 3 (ಮೂರು) ವರ್ಷಗಳ ಕಾಲ ಮುಂದಿನ ವೇತನ ಬಡ್ತಿಯ ಮೇಲೆ ಯಾವುದೇ ಪರಿಣಾಮ ಬೀರದಂತೆ ತಡೆಹಿಡಿಯುವ ಹಾಗೂ ಅನಧಿಕೃತ ಗೈರುಹಾಜರಿ ಅವಧಿಯನ್ನು (09.07.2002 ರಿಂದ 01-09-2002 ರವರೆಗೆ) ವೇತನ ರಹಿತ ರಜೆ ಎಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

5ನೇ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:24-05-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎಲ್ಲಾ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನು ಪರಿಶೀಲಿಸಲಾಗಿದೆ. ಈ ಎಲ್ಲಾ ದಂಡನಾದೇಶಗಳನ್ನೂ ಅರ್ಜಿದಾರರ ಸೇವಾ ಅವಧಿಯಲ್ಲೇ ಹೊರಡಿಸಿದ್ದು, ಶಿಕ್ಷೆಗಳ ಅವಧಿಯು ದಿನಾಂಕ:30-04-2005ಕ್ಕೆ ಪೂರ್ಣಗೊಂಡಿರುತ್ತದೆ. ಆದರೆ, ಅರ್ಜಿದಾರರು ದಿನಾಂಕ:31-07-2004ಕ್ಕೆ ವಯೋ ನಿವೃತ್ತಿ ಹೊಂದುತ್ತಿದ್ದುದರಿಂದ, ವಾರ್ಷಿಕ ವೇತನ ಬಡ್ತಿಯನ್ನು ಮಂಜೂರು ಮಾಡಲು ದಿನಾಂಕ:01-01-2002 ರಿಂದ ವಯೋ ನಿವೃತ್ತಿ ದಿನಾಂಕದವರೆಗೆ ಯಾವುದೇ ದ್ರವ್ಯ ಲಾಭಕ್ಕೆ ಅರ್ಹರಿಲ್ಲದ ಕಾರಣ, ನೋಷನಲ್ `ಪೇ`(pay) ಅನ್ನು ಮಂಜೂರು ಮಾಡಿ, ಪಿಂಚಣಿ ಲೆಕ್ಕಕ್ಕೆ ವೇತನವನ್ನು 2004ರ ಸಾಲಿಗೆ ನಿಗದಿಪಡಿಸಿದ ವೇತನಕ್ಕೆ (ರೂ.6450/-) ಲೆಕ್ಕ ಹಾಕಿ, ಪಿಂಚಣಿಯ ಮೇಲೆ ಯಾವುದೇ ಪರಿಣಾಮ ಬೀರುವುದಿಲ್ಲವಾದ್ದರಿಂದ, ಪಿಂಚಣಿ ನಿಗದಿಪಡಿಸಲಾಗಿದೆ ಎಂದು ತಿಳಿಸಿ, ತಮಗೆ ನಿವೃತ್ತಿ ವೇತನ ರೂ.3000/-ಗಳಿಗೆ ನಿಗದಿಪಡಿಸಿದ್ದು, ತಮಗೆ ರೂ.6600/-ಗಳಿಗೆ ವೇತನ ನಿಗದಿಪಡಿಸಿ, ದಂಡನೆಗಳನ್ನು ರದ್ದುಪಡಿಸಿ, ನಿವೃತ್ತಿ ವೇತನ ಮಂಜೂರು ಮಾಡಲು ಕೋರಿರುತ್ತಾರೆ. ಆದರೆ, ಮಹಾಲೇಖಪಾಲರು ನಿಗದಿಪಡಿಸಿರುವ ನಿವೃತ್ತಿ ವೇತನ ಇವರಿಗೆ ವಿಧಿಸಿರುವ ದಂಡನೆಗಳ ಮೇಲೆ ಆಧಾರವಾಗಿದ್ದು, ಕರ್ತವ್ಯದಲ್ಲಿದ್ದಾಗ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ಸಲ್ಲಿಸದೇ, ನಿವೃತ್ತಿಯ ನಂತರ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿ ಸಲ್ಲಿಸಿದ್ದು, ಈ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಗಣಿಸಲು ಅರ್ಹವಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದರಿಂದ ಶಿಸ್ತು ಪ್ರಾಧಿಕಾರಿಯು ದಂಡನೆಗಳನ್ನು ವಿಧಿಸಿದ್ದು, ಈ ಲಘು ದಂಡನಾ ಆದೇಶಗಳಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 365 ಪೊಸಿಅ 2006 ಬೆಂಗಳೂರು, ದಿನಾಂಕ:27ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹಲಗಯ್ಯ, ನಿವೃತ್ತ ಪಿಎಸ್‌ಐ ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:14-10-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1597

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಕಾರ್ಯನಿರತ ವಿಭಾಗಗಳ ಉಪ ನಿರ್ದೇಶಕರ ಹುದ್ದೆಗಳನ್ನು ಜಂಟಿ ನಿರ್ದೇಶಕರ ಹುದ್ದೆಗಳನ್ನಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಕಡತ ಸಂಖ್ಯೆ: ಪಿಡಿ 28 ಪಿಎಂಎಂ 2006(ಭಾಗ-1)

2. ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಕಡತ ಸಂಖ್ಯೆ: ಪಿಡಿ 132 ಎಸ್‌ಎಸ್‌ಎಂ 2006.

**ಪ್ರಸ್ತಾವನೆ:**

ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಕಡತಗಳಲ್ಲಿ ಇಲಾಖೆಯ ಕಾರ್ಯನಿರತ ವಿಭಾಗಗಳ ಉಪ ನಿರ್ದೇಶಕರ ಹುದ್ದೆಯ ವೇತನ ಶ್ರೇಣಿ ರೂ.7400-13120 ಆಗಿರುತ್ತದೆ. ಈ ಹುದ್ದೆಗಳನ್ನು ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಅಧಿಕಾರಿಗಳನ್ನು ನಿಯೋಜನೆ ಮೇರೆಗೆ ತೆಗೆದುಕೊಳ್ಳುವ ಮೂಲಕ ತುಂಬಲಾಗುತ್ತಿದೆ. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2000, ದಿನಾಂಕ:09.06.2005ರಲ್ಲಿ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಉಪ ನಿರ್ದೇಶಕರ ವೃಂದದ ವೇತನ ಶ್ರೇಣಿಯನ್ನು ದಿನಾಂಕ:09.06.2005ರಿಂದ ಜಾರಿಗೆ ಬರುವಂತೆ ರೂ.9580-14200ಕ್ಕೆ ಉನ್ನತೀಕರಿಸಲಾಗಿರುತ್ತದೆ. ಇದರಿಂದಾಗಿ ಸಚಿವಾಲಯದ ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಉಪ ನಿರ್ದೇಶಕರ ಹುದ್ದೆಯನ್ನು ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳಿಗೆ ಆಡಳಿತಾತ್ಮಕ ಬಿಕ್ಕಟ್ಟು ಉಂಟಾಗಿದ್ದು, ಇದನ್ನು ಸರಿಪಡಿಸಲು ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿನ ಒಟ್ಟು 17 ಉಪ ನಿರ್ದೇಶಕರ ಹುದ್ದೆಗಳ ಪೈಕಿ 09 ಹುದ್ದೆಗಳನ್ನು ಜಂಟಿ ನಿರ್ದೇಶಕರುಗಳ ಹುದ್ದೆಗಳನ್ನಾಗಿ ಪರಿವರ್ತಿಸಿ ಈ ಹುದ್ದೆಗಳನ್ನು ನಿಯೋಜನೆಯಿಂದ ತುಂಬಲು ಅವಕಾಶ ಮಾಡಿಕೊಡುವಂತೆ ಯೋಜನಾ ಇಲಾಖೆಯು ಪ್ರಸ್ತಾವನೆ ಕಳುಹಿಸಿದೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 401 ಸಅಸೇ 2006, ಬೆಂಗಳೂರು, ದಿನಾಂಕ:24ನೇ ನವೆಂಬರ್, 2006**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿನ ಕಾರ್ಯನಿರತ ವಿಭಾಗಗಳಲ್ಲಿ ಮಂಜೂರಾಗಿರುವ ಉಪ ನಿರ್ದೇಶಕರ ವೃಂದದ ಒಟ್ಟು 17 ಹುದ್ದೆಗಳ ಪೈಕಿ 09 ಹುದ್ದೆಗಳನ್ನು ಈ ಹುದ್ದೆಗಳಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ-ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಉಪ ನಿರ್ದೇಶಕರು ನಿಯೋಜನೆಯ ಮೇಲೆ ಮುಂದುವರಿಯಲು ಅನುಕೂಲವಾಗುವಂತೆ- ಈ ಆದೇಶವನ್ನು ಹೊರಡಿಸುವ ದಿನಾಂಕದಿಂದ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ರೂ.9580-14200ರ ಜಂಟಿ ನಿರ್ದೇಶಕರ ಹುದ್ದೆಗಳನ್ನಾಗಿ ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸಿ.ಆ.ಸು.ಇಲಾಖೆ (ಸೇವಾ ನಿಯಮ-3) ವಿಭಾಗದ ಟಿಪ್ಪಣಿ ಸಂಖ್ಯೆ: ಸಿಆಸುಇ 118 ಸೇನಿಡಿ 2006, ದಿನಾಂಕ:28.09.2006 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1821/ ವೆಚ್ಚ-5/ 2006, ದಿನಾಂಕ:13.11.2006ಗಳಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1679

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಸೇವೆಗಳು-2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಶಿಷ್ಟಾಚಾರ ವಿಭಾಗದಲ್ಲಿ ಪ್ರತ್ಯೇಕವಾಗಿ ಶೀಷ್ಟಾಚಾರ (ವಿದೇಶ ಕೋಶ) ವನ್ನು ಪ್ರಾರಂಭಿಸುವ ಕುರಿತು.

**ಪ್ರಸ್ತಾವನೆ:**

ಜರ್ಮನಿಯ ರಾಯಭಾರಿ ಕಛೇರಿಯನ್ನು ಬೆಂಗಳೂರಿನಲ್ಲಿ ತೆರೆಯುವ ಸಂಬಂಧದಲ್ಲಿ ಅಗತ್ಯವಿರುವ ಸೇವಾ ಸೌಲಭ್ಯಗಳನ್ನು ಒದಗಿಸುವ ಹಿನ್ನೆಲೆಯಲ್ಲಿ ಸಿ.ಆ.ಸು.ಇಲಾಖೆಯ ಶಿಷ್ಟಾಚಾರ ವಿಭಾಗದಲ್ಲಿ ಪ್ರತ್ಯೇಕವಾಗಿ ಶಿಷ್ಟಾಚಾರ (ವಿದೇಶ ಕೋಶ)ವನ್ನು ಪೂರಕ ಸಿಬ್ಬಂದಿಯೊಂದಿಗೆ ಸೃಜಿಸುವ ಅಗತ್ಯತೆಯನ್ನು ಸರ್ಕಾರವು ಮನಗಂಡಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 94 ಸಸಿವಿ 2006, ಬೆಂಗಳೂರು, ದಿನಾಂಕ:25ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಶಿಷ್ಟಾಚಾರ ವಿಭಾಗದಲ್ಲಿ ಪ್ರತ್ಯೇಕವಾಗಿ ಶಿಷ್ಟಾಚಾರ (ವಿದೇಶ ಕೋಶ)ವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ (ಶಿಷ್ಟಾಚಾರ-ವಿದೇಶ ಕೋಶ) | 01 |
| 2. | ಶಾಖಾಧಿಕಾರಿ | 01 |
| 3. | ಹಿರಿಯ ಸಹಾಯಕ | 01 |
| 4. | ಶೀಘ್ರಲಿಪಿಗಾರ (ಇಂಗ್ಲೀಷ್: ಕಂಪ್ಯೂಟರ್) | 01 |
| 5. | ಕಿರಿಯ ಸಹಾಯಕ | 01 |
| 6. | ಗ್ರೂಪ್ 'ಡಿ' | 01 |

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1949 ವೆಚ್ಚ-5/ 2006, ದಿನಾಂಕ:14.11.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1680

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಸೇವೆಗಳು-2).

**ವಿಷಯ:** ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 142 ಎಸ್‌ಇಎನ್ 05, ಬೆಂಗಳೂರು, ದಿನಾಂಕ:18ನೇ ನವೆಂಬರ್, 2006**

ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್‌ರವರು ಬಾಗಲಕೋಟೆ ನಗರಾಭಿವೃದ್ಧಿ ಪ್ರಾಧಿಕಾರದ ಕಛೇರಿಯಲ್ಲಿ ದಿನಾಂಕ:01.02.2003 ರಿಂದ 21.10.2003 ರವರೆಗೆ ಮುಖ್ಯ ಇಂಜಿನಿಯರ್ ಆಗಿ ಕೆಲಸ ನಿರ್ವಹಿಸಿದ ಅವಧಿಯಲ್ಲಿ "ಹಳೆ ಬಾಗಲಕೋಟೆ ಪಟ್ಟಣಕ್ಕೆ ವ್ಯಾಪಕವಾಗಿ ಒಳಚರಂಡಿ ವ್ಯವಸ್ಥೆ ಒದಗಿಸುವ ಕಾಮಗಾರಿಗೆ" ಸಂಬಂಧಿಸಿದಂತೆ,

1. ಸದರಿ ಕಾಮಗಾರಿ ಅಂದಾಜು ಪತ್ರಿಕೆಗೆ ಸಕ್ಷಮ ಪ್ರಾಧಿಕಾರದಿಂದ (ತಾಂತ್ರಿಕ ಉಪಸಮಿತಿಯಿಂದ) ಅನುಮತಿ ಪಡೆದುಕೊಳ್ಳದೆ ಮಂಜೂರಾತಿ ನೀಡಿ ಟೆಂಡರ್ ಪ್ರಕ್ರಿಯೆಗಳನ್ನು ಕೈಗೊಂಡು ಕರ್ನಾಟಕ ಲೋಕೋಪಯೋಗಿ ಇಲಾಖೆ ಕೋಡ್ ಸಂಪುಟ-1ರ ಕಂಡಿಕೆ 104 ಹಾಗೂ ಕೆ.ಎಫ್.ಸಿ. ನಿಯಮ 178ರ ಉಲ್ಲಂಘನೆ.
2. ಸದರಿ ಕಾಮಗಾರಿಯ ದೃಢೀಕೃತ ಟೆಂಡರ್ ಷೆಡ್ಯೂಲ್-ಬಿ ಬಗ್ಗೆ ಕರ್ನಾಟಕ ಲೋಕೋಪಯೋಗಿ ಇಲಾಖೆ ಕೋಡ್ ಸಂಪುಟ-1ರ ಪ್ಯಾರಾ 181ರ ಪ್ರಕಾರ ಪ್ರತೀ ಪುಟಕ್ಕೆ ಸಹಿ ಮಾಡದೆ ಕರ್ತವ್ಯಲೋಪ ಎಸಗಿರುವುದು.
3. ಸದರಿ ಕಾಮಗಾರಿ ದೃಢೀಕೃತ ಷೆಡ್ಯೂಲ್-ಬಿ ದಲ್ಲಿನ ಎಲ್ಲ ಐಟಂಗಳ ಮೊತ್ತಗಳನ್ನು ದೃಢೀಕರಿಸದೆ ಬದಲಾವಣೆಗೊಂಡ ಪ್ರಮಾಣೀಕೃತ ಟೆಂಡರ್ ಪುಸ್ತಕಗಳಿಗೆ ಸಹಿ ಮಾಡಿ ಕರ್ನಾಟಕ ಲೋಕೋಪಯೋಗಿ ಇಲಾಖೆ ಕೋಡ್ ಸಂಪುಟ-1ರ ಕಂಡಿಕೆ 181ರ ನಿಯಮಗಳ ಉಲ್ಲಂಘನೆ.
4. ಸದರಿ ಕಾಮಗಾರಿಯ ಮೊದಲನೆ ಬಿಲ್ಲು ಪಾವತಿಗಾಗಿ ಮೇಲುರುಜುವಿಗೆ ಬಂದಾಗ ಷೆಡ್ಯೂಲ್-ಬಿ ದರಗಳಂತೆ ಹೋಲಿಸಿ ಪರಿಶೀಲಿಸದೇ ಸಂದಾಯ ಮಾಡಿದ ಕರ್ತವ್ಯಲೋಪ.
5. ಈ ರೀತಿ ದರ ಬದಲಾವಣೆಯಿಂದ ಸರ್ಕಾರಕ್ಕೆ ರೂ.59,85,060/- ತಾತ್ಕಾಲಿಕ ಹಾನಿ ಉಂಟು ಮಾಡಿ ಕರ್ನಾಟಕ ಆರ್ಥಿಕ ಸಂಹಿತೆಯ ನಿಯಮ 349, 350ರ ಉಲ್ಲಂಘನೆ ಮಾಡಿದ ಆರೋಪಕ್ಕೆ ಕಾರಣರಾಗಿ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದ,

ಮೇಲ್ಕಂಡ ದುರ್ನಡತೆಗಾಗಿ, ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ ಭಂಡಾರಿ**

ಪಿ.ಆರ್. 1681

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಸೇವೆಗಳು-3).

## FINANCE SECRETARIAT

**Subject:** Special Allowance- Revision and Rationalisation of rates-Sanction/ continuance of Special Allowance in certain cases-issue of orders.

**Read:** G.O. No. FD 13 SRP 2000(1) Dated:9th June 2005.

**Preamble:**

In pursuance of the recommendations made by the Official Committee 2005, Government reviewed the entire issue of payment of Special allowance sanctioned to certain categories of posts in all the Departments of Government and in supersession of all the previous orders issued by the Government in the matter, orders were issued in Government Order Dated: 09.06.2005 read above sanctioning/ revisiing the rates of special allowance in respect of the posts specified in the Annexure to the said Government Order at the rates indicated against them with effect from 01.06.2005.

In para 2 of the said Government Order Dated:09.06.2005, it was directed that the cases where special allowance was sanctioned with the specific approval of the Government and which have not been covered by the Annexure to the Government Order Dated:09.06.2005 read above shall be referred to Government in Finance Department for further orders. Accordingly, some of the Departments have referred cases wherein special allowance sanctioned to certain categories of posts with the approval of the Government in Finance Department and which have not been covered by the Government Order Dated:09.06.2005, for further continuance. In certain cases, Administrative Departments have requested for rationalization of the rates of special allowance and in a few other cases Administrative Departments have requested for sanction of special allowance to certain fresh categories of posts. Sanction/ continuance of special allowance in these cases has been considered by the Government and accordingly the following orders are issued.

**Government Order No. FD 27 SRP 2006, Bangalore, Dated:21st, November, 2006**

In the circumstances explained in the preamble, Government are pleased to modify the orders issued in Government Order Dated:09.06.2005 read above to the extent indicated below:

I. In the entries under the heading the "Personal Establishment of Chief Minister/ Minister/ Minister of State" at Sl.No.3.

(1) for the entries at clauses (d), the following entries shall be submitted:

| | | |
|---|---|---|
| **(d)** | **Officer on Special Duty (CM's Estt)** | |
| (i) | Officer above the rank of Assistant Commissioner/ Under Secretary | 225 |
| (ii) | Officer of the rank of Assistant Commissioner/ Under Secretary | 150 |
| (iii) | Officer below the rank of Assistant Commissioner/ Under Secretary or Group-B Officer | 110 |

(2) for the entries at clause (g), the following entries shall be substituted:

| | | |
|---|---|---|
| **(g)** | **Special Officer** | |
| (i) | Officer above the rank of Assistant Commissioner/ Under Secretary. | 225 |
| (ii) | Officer of the rank of Assistant Commissioner/ Under Secretary. | 150 |
| (iii) | Officer below the rank of Assistant Commissioner/ Under Secretary or Group-B Officer. | 110 |

II. After the entries at Sl.No.9, the following entries shall be inserted:

| | | |
|---|---|---|
| **9A** | **Judicial Department** | |
| | (a) Judgement Writers | 150 |

III. After the entries at Sl.No.9A, so inserted, the following entries shall be inserted:

| | | |
|---|---|---|
| **9B** | **Karnataka Administerative Tribunal** | |
| | (a) P.S. cum Judgement Writer | 200 |
| | (b) Junior Jugement Writer | 150 |
| | (c) Judgement Writer/ Junior Judgement Writer/ Stenographers working in the personal establishment of Chairman/ Vice Chairman/ Members | 100 |

IV. In the entries under the heading 'Fire Force Department' at Sl.No.14, for the entires at clause (k), the following entries shall be substituted:

| | | |
|---|---|---|
| (k) | Fireman Driver | 90 |

V. In the entries under the heading 'Karnataka Legislature' at Sl.No.19,

(1) under sub-heading (1), for the entires at clause (a) (i) and (ii), the following entries shall be substituted:

| | | |
|---|---|---|
| **(a)** | **Private Secretary-** | |
| | (i) Officer above the rank of Assistant Commissioner/ Under Secretary | 225 |
| | Officer of the rank of Assistant Commissioner/ Under Secretary | 150 |
| | (iii) Officer below the Rank of Assistant Commissioner/ Under Secretary or Group 'B' officer | 110 |

(2) After the entries under sub-heading (1), the following entries shall be inserted as sub-heading (1A):

| | | |
|---|---|---|
| **(1A)** | **Personal Establishment of Speaker, Legislative Assembly:** | |
| **(a)** | **Secretary to Speaker,** | |
| | Group A officer not below the rank of Deputy Secretary | 225 |
| **(b)** | **Officer on Special Duty to Speaker** | |
| (i) | Officer above the rank of Assistant Commissioner/ Under Secretary | 225 |
| (ii) | Officer of the rank Assistant Commissioner or Under Secretary | 150 |
| (iii) | Officer below the Rank of Assistant Commissioner or Under Secretary or Group 'B' Officer. | 110 |

(3) After the entires under sub-heading (1A) so inserted, the following entries shall be inserted as sub-heading (1B):

| | | |
|---|---|---|
| **(1B)** | **Personal Establishment of Deputy Speaker, Legislative Assembly/ Deputy Chairman, Legislative Council** | |
| **(a)** | **Private Secretary-** | |
| (i) | Officer above the rank of Assistant Commissioner/ Under Secretary | 225 |
| (ii) | Officer of the rank Assistant Commissioner or Under Secretary | 150 |
| (iii) | Officer below the Rank of Assistant Commissioner or Under Secretary or Group 'B' Officer. | 110 |

(4) For the entries in clause (a) under sub-heading (2), the following entries shall be substituted:

| | | |
|---|---|---|
| **(a)** | **Private Secretary-** | |
| (i) | Officer above the rank of Assistant Commissioner/ Under Secretary | 225 |
| (ii) | Officer of the rank Assistant Commissioner or Under Secretary | 150 |
| (iii) | Officer below the Rank of Assistant Commissioner or Under Secretary or Group 'B' Officer. | 110 |

VI. In the entries under the heading 'Lokayukta/ Upalokayukta' at Sl.No.20, after the entries at clause (d), the following entries shall be inserted:

| | | |
|---|---|---|
| (e) | Gazetted Assistant | 200 |
| (f) | SDA workign as Telephone Operator | 25 |
| (g) | Staff working in the home office of Lokayukta/ Upalokayukta<br>(i) FDA<br>(ii) SDA | <br>75<br>50 |

VII. In the entries under the heading 'Karnataka Government Secretariat' at Sl.No.26,

(1) for the words "DPAR (Accounts)" at Sl.No.2 (ii), the words "DPAR (Accounts-1)" shall be substituted.

(2) after the entires at Sl.No.2(ii), the following entries shall be inserted:

| | |
|---|---|
| 2 (iii) DPAR (Accounts-2) | |
| (1) Under Secretary 1 Post<br>(2) Section Officer 1 Post<br>(3) Senior Assistant 3 Posts<br>(4) Junior Assistant 2 Posts<br>(5) Typist 1 Post<br>(6) Dalayat 1 Post | Two percent of the mean between the minimum and maximum of the 1999 scale of pay applicable to the post subject to a maximum of Rs.150/-P.M |

2. These orders will come into force with effect from 1st June 2005.

By Order and inthe name of the Governor of Karnataka,

**N.T. NAIK**

Deputy Secretary to Government,
Finance Department (Services-2).

PR-1683

## ಶಿಕ್ಷಣ ಸಚಿವಾಲಯ

## ಸೇರ್ಪಡೆ ಆದೇಶ

### ಸಂಖ್ಯೆ: ಇಡಿ 139 ಎಲ್‌ಐಬಿ 2006, ಬೆಂಗಳೂರು, ದಿನಾಂಕ:30ನೇ ನವೆಂಬರ್, 2006

ದಿನಾಂಕ:27.11.2006ರ ಅಧಿಸೂಚನೆ ಸಂಖ್ಯೆ: ಇಡಿ 139 ಎಲ್‌ಐಬಿ 2006ರಲ್ಲಿನ ಮೊದಲನೇಯ ಕಲಂ ರಡಿ, "ಪ್ರಕರಣ 3(2)(ಜೆ)" ಎಂಬ ಶೀರ್ಷಿಕೆಯ ನಂತರ ಈ ಕೆಳಕಂಡ ಸದಸ್ಯರನ್ನೊಳಗೊಂಡ ಪ್ರಕರಣ 3(2)(ಕೆ) ಅನ್ನು ಈ ಮೂಲಕ ಸೇರ್ಪಡಿಸಲಾಗಿದೆ:

| ಪ್ರಕರಣ | ವಿವರ | ಪದನಾಮ |
|---|---|---|
| "3(2)(ಕೆ): ರಾಜ್ಯ ಸರ್ಕಾರದವರು ನಾಮನಿರ್ದೇಶನ ಮಾಡಿದ ಮತ್ತು ರಾಜ್ಯ ಸರ್ಕಾರದವರ ಅಭಿಪ್ರಾಯದ ಮೇರೆಗೆ ಪುಸ್ತಕ ಭಂಡಾರದ ಶಾಸ್ತ್ರದಲ್ಲಿ ತಜ್ಞರಾಗಿರುವಂತಹ ಮೂರು ವ್ಯಕ್ತಿಗಳು; | 1. ಡಾ: ಬಂಡಿ,<br>ಗ್ರಂಥಪಾಲಕರು, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.<br>2. ಡಾ: ತಳವಾರ,<br>ಪ್ರಾಧ್ಯಾಪಕರು, ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.<br>3) ಡಾ: ಪಿ.ಬಿ. ಕೊಣ್ಣೂರು,<br>ಗ್ರಂಥಪಾಲಕರು, ಬೆಂಗಳೂರು ವಿಶ್ವವಿದ್ಯಾಲಯ ಗ್ರಂಥಾಲಯ, ಬೆಂಗಳೂರು. | <br>ಸದಸ್ಯರು<br><br>ಸದಸ್ಯರು<br><br><br>ಸದಸ್ಯರು" |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

ಪಿ.ಆರ್. 1708

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಹಾನಗಲ್ ನ್ಯಾಯಾಲಯಕ್ಕೆ ಅಪರ ಸರ್ಕಾರಿ ವಕೀಲರ ಹುದ್ದೆ ಸೃಜಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: 243 ಎಲ್‌ಸಿಇ 99 ದಿನಾಂಕ:02.02.2001.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಹಾವೇರಿ ಜಿಲ್ಲೆಯ ಹಾನಗಲ್‌ನಲ್ಲಿ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಸ್ಥಾಪಿಸಲು ಮಂಜೂರಾತಿ ನೀಡಲಾಗಿತ್ತು. ಈ ನ್ಯಾಯಾಲಯಕ್ಕೆ ಅಪರ ಸರ್ಕಾರಿ ವಕೀಲರ ಹುದ್ದೆ ಸೃಜಿಸುವುದರ ಅವಶ್ಯಕತೆ ಮನಗಂಡು ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 32 ಎಲ್ಎಜಿ 2006, ಬೆಂಗಳೂರು, ದಿನಾಂಕ:2ನೇ ಡಿಸೆಂಬರ್, 2006**

ಹಾನಗಲ್ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯಕ್ಕೆ ಅಪರ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು (1977) ಷೆಡ್ಯೂಲ್ 06ರ ಪಟ್ಟಿಗೆ ಉಲ್ಲೇಖಿತ ಹುದ್ದೆಯನ್ನು ಕ್ರಮ ಸಂಖ್ಯೆ: 69 ಎಂಬುದಾಗಿ ಸೇರಿಸಿಕೊಳ್ಳತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 1020 ವೆಚ್ಚ-7 2006 ದಿನಾಂಕ:20.11.2006ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇ. ಶಿವಾನಂದ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 1709

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸರ್ಕಾರದ ಕಾರ್ಯದರ್ಶಿ: ಪ್ರಧಾನ ಕಾರ್ಯದರ್ಶಿ ಹುದ್ದೆಗಳನ್ನು ಮರುಪದನಾಮೀಕರಿಸುವ ಹಾಗೂ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ಮಹಾಲೇಖಪಾಲರ ಪತ್ರ ಸಂಖ್ಯೆ: ಜಿಎಂ/ ಐಎಎಸ್ I V D/ 616-19 ದಿನಾಂಕ:31.10.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಮಹಾಲೇಖಪಾಲರ ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಕೃಷಿ ಮತ್ತು ತೋಟಗಾರಿಕೆ ಇಲಾಖೆ (ಕೃಷಿ), ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಮತ್ತು ಸರ್ಕಾರದ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಗಳನ್ನು ಮುಂದುವರಿಸಲು ಕೋರಿರುತ್ತಾರೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 90 ಸಸಿವಿ 2006, ಬೆಂಗಳೂರು, ದಿನಾಂಕ:2ನೇ ಡಿಸೆಂಬರ್, 2006**

ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಕಾರ್ಯದರ್ಶಿ, (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಶ್ರೀ ಬಿ.ಎಲ್. ಶ್ರೀಧರ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಅವರ ಕಾರ್ಯಾವಧಿಯವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆ ಎಂದು ಮರುಪದನಾಮೀಕರಿಸಿದೆ. ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ ಹುದ್ದೆಗಳನ್ನು ಎಕ್ಸ್ ಕೇಡರ್ ಮಾಡಿದ ದಿನಾಂಕ:06.07.2006 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1710

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ
### ಸೇರ್ಪಡೆ

**ಸಂಖ್ಯೆ: ಆಕುಕ 189 ಪಿಟಿಡಿ 2006, ಬೆಂಗಳೂರು, ದಿನಾಂಕ:20ನೇ ನವೆಂಬರ್, 2006**

ಬಿ.ಎ.ಎಂ.ಎಸ್., ಬಿ.ಯು.ಎಂ.ಎಸ್., ಬಿ.ಹೆಚ್.ಎಂ.ಎಸ್., ಬಿ.ಎನ್.ವೈ.ಎಸ್. ಕೋರ್ಸ್‌ಗಳ ಪ್ರವೇಶಕ್ಕೆ ನಿಗದಿಗೊಳಿಸಿದ ಫಿಸಿಕ್ಸ್, ಕೆಮಿಸ್ಟ್ರಿ, ಬಯಾಲಜಿ ವಿಷಯಗಳ ಕನಿಷ್ಟ ಅಂಕಗಳನ್ನು ಹಿಂದುಳಿದ ವರ್ಗದ ಅಭ್ಯರ್ಥಿಗಳಿಗೆ ಶೇ.40ನ್ನು ನಿಗದಿಗೊಳಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ: ಆಕುಕ 189 ಪಿಟಿಡಿ 2006, ದಿನಾಂಕ:11.09.2006ರ ಆದೇಶದ ಭಾಗದಲ್ಲಿ ಬಿ.ಎ.ಎಂ.ಎಸ್., ಬಿ.ಯು.ಎಂ.ಎಸ್., ಬಿ.ಹೆಚ್.ಎಂ.ಎಸ್. ನ ನಂತರ ಬಿ.ಎನ್.ವೈ.ಎಸ್. ಕೋರ್ಸಿನ ಪ್ರವೇಶಕ್ಕೆ ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1711

## PERSONNEL AND ADMINISTRATIVE REFORMS SECRETARIAT
### CORRIGENDUM

**No. DPAR 131 SAS 2006, Bangalore, Dated: 29th November, 2006**

In the Government order of even number Dated:12.09.2006, relating to declaration of equivalence under rule 9 of IAS (Pay) Rules, 1954, the words "Development Board" occuring in the third line shall be substituted with the following words "Development Department".

By Order and in the name of the Governor of Karnataka,
**M. VASUDEVAMURTHY**
Under Secretary to Government,
Department of Personnel and Administrative Reforms (Services-1).

PR-1714

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಒಇ 507 ಪಿಪಿಇ 2006, ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 2006

ದಿನಾಂಕ:14.11.2006ರ ಸಮಸಂಖ್ಯೆಯ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮಸಂಖ್ಯೆ: (23)ರಲ್ಲಿನ ಅಂಕಣ 4ರಲ್ಲಿ ನಮೂದಿಸಿರುವ "18/05" ಎಂಬುದರ ಬದಲಾಗಿ "118/05" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1727

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ.ಮತ್ತು ಸು. ಮತ್ತು ಕಾಫಿಪೋಸ ಮತ್ತ ಮತ್ತು ಅಭಿಯೋಗ).

## ಸಾರಿಗೆ ಸಚಿವಾಲಯ

### ತಿದ್ದುಪಡಿ ಆದೇಶ

### ಸಂಖ್ಯೆ: ಸಾರಿಇ 121 ಸಾಇಪ 2006, ಬೆಂಗಳೂರು, ದಿನಾಂಕ:8ನೇ ನವೆಂಬರ್, 2006

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 121 ಸಾಇಪ 06, ದಿನಾಂಕ:25.07.2006.

2) ತಿದ್ದುಪಡಿ ಆದೇಶ ಸಂಖ್ಯೆ: ಸಾರಿಇ 121 ಸಾಇಪ 06, ದಿನಾಂಕ:11.08.2006.

ಮಂಡ್ಯ ಜಿಲ್ಲೆ ನಾಗಮಂಗಲ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ತೆರೆಯುವ ಮಂಜೂರಾತಿ ನೀಡಿ ಉಲ್ಲೇಖ (1)ರಲ್ಲಿರುವ ದಿನಾಂಕ:25.07.2006ರಲ್ಲಿ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದ್ದು, ಸದರಿ ಕಛೇರಿ ಕಾರ್ಯವ್ಯಾಪ್ತಿಗೆ ನಾಗಮಂಗಲ, ಕೆ.ಆರ್.ಪೇಟೆ ಮತ್ತು ಪಾಂಡವಪುರ ತಾಲ್ಲೂಕುಗಳನ್ನು ಸೇರಿಸಲಾಗಿತ್ತು.

ಉಲ್ಲೇಖ (2)ರ ತಿದ್ದುಪಡಿ ಆದೇಶದಲ್ಲಿ ನಾಗಮಂಗಲ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯ ವ್ಯಾಪ್ತಿಯನ್ನು ಭಾಗಶಃ ಮಾರ್ಪಡಿಸಿ ನಾಗಮಂಗಲ ಮತ್ತು ಕೆ.ಆರ್. ಪೇಟೆ ತಾಲ್ಲೂಕುಗಳು ಹಾಗೂ ಪಾಂಡವಪುರ ತಾಲ್ಲೂಕಿನ ಮೇಲುಕೋಟೆ ಹೋಬಳಿಯನ್ನು ಮಾತ್ರ ಸದರಿ ಕಛೇರಿ ವ್ಯಾಪ್ತಿಗೆ ಹಂಚಿಕೆ ಮಾಡಲಾಗಿತ್ತು.

ಉಲ್ಲೇಖ (1) ಮತ್ತು (2)ರ ಆದೇಶಗಳನ್ನು ಮಾರ್ಪಡಿಸಿ ನಾಗಮಂಗಲ ಮತ್ತು ಕೆ.ಆರ್. ಪೇಟೆ ತಾಲ್ಲೂಕುಗಳನ್ನು ಮಾತ್ರ ನಾಗಮಂಗಲ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿ ವ್ಯಾಪ್ತಿಯಲ್ಲಿ ಉಳಿಸಿಕೊಂಡು ಪಾಂಡವಪುರ ತಾಲ್ಲೂಕನ್ನು ಮಂಡ್ಯ ಪ್ರಾದೇಶಿಕ ಸಾರಿಗೆ ಕಛೇರಿ ವ್ಯಾಪ್ತಿಯಲ್ಲಿಯೇ ಮುಂದುವರೆಸಿ ಹಂಚಿಕೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಪ್ಪ**

ಪಿ.ಆರ್. 1731

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿ ಪುನರ್ರಚನೆ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 142 ಸಿಎಸ್‌ಇ 2005, ದಿನಾಂಕ:09.05.2005.

2) ಸರ್ಕಾರಿ ಆದೇಶ ಸಂಖ್ಯೆ: ಆಇ 142 ವಾತೆಸಿ 2005, ದಿನಾಂಕ:04.07.2006.

3) ಸರ್ಕಾರಿ ಆದೇಶ ಸಂಖ್ಯೆ: ಆಇ 142 ವಾತೆಸಿ 2005, ದಿನಾಂಕ:30.10.2006.

4) ವಾಣಿಜ್ಯ ತೆರಿಗೆ ಆಯುಕ್ತರು, ಬೆಂಗಳೂರು, ಇವರ ಪತ್ರ ಸಂಖ್ಯೆ: ವ್ಯಾಟ್/ ಸಿಆರ್-11/ 03-04, ದಿನಾಂಕ:28.09.2006.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿನ ಆದೇಶದಲ್ಲಿ ರಾಜ್ಯಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಒಂದು ವರ್ಷದ ಅವಧಿಗೆ ರಚಿಸಲಾಗಿತ್ತು. ಕ್ರಮಸಂಖ್ಯೆ (2) ಮತ್ತು (3)ರ ಆದೇಶಗಳಲ್ಲಿ ಸದರಿ ಸಮಿತಿಯನ್ನು ಪುನರ್ ರಚಿಸಲಾಗಿರುತ್ತದೆ.

ಬಾಗಲಕೋಟೆ ಜಿಲ್ಲಾ ವಾಣಿಜ್ಯೋದ್ಯಮ ಸಂಸ್ಥೆ, ಬಾಗಲಕೋಟೆ ಈ ಸಂಸ್ಥೆಯನ್ನು ರಾಜ್ಯಮಟ್ಟದ ಮೌಲ್ಯವರ್ಧಿತ ತೆರಿಗೆ ಸಮಿತಿಯಲ್ಲಿ ಸದಸ್ಯರನ್ನಾಗಿ ಸೇರಿಸಲು ವಾಣಿಜ್ಯ ತೆರಿಗೆ ಆಯುಕ್ತರು ಮೇಲೆ ಓದಲಾಗಿರುವ ಕ್ರಮಸಂಖ್ಯೆ (4)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ವಾಣಿಜ್ಯ ತೆರಿಗೆ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಆಇ 142 ವಾತೆಸಿ 2005, ಬೆಂಗಳೂರು, ದಿನಾಂಕ:2ನೇ ಡಿಸೆಂಬರ್, 2006

ಪ್ರಸ್ತಾವನೆಯಲ್ಲಿ ಹೇಳಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು, ಅಧ್ಯಕ್ಷರು, ಬಾಗಲಕೋಟೆ ಜಿಲ್ಲಾ ವಾಣಿಜ್ಯೋದ್ಯಮ ಸಂಸ್ಥೆ, ಬಾಗಲಕೋಟೆ ಇವರನ್ನು ಕರ್ನಾಟಕ ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯ ಸದಸ್ಯರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1743

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾತೆ-2).

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಭವನ ಚಾಲುಕ್ಯ ವಿಭಾಗದ ಲಿಫ್ಟ್‌ನ 2006-07ನೇ ಸಾಲಿನ ನಿರ್ವಹಣಾ ವೆಚ್ಚವನ್ನು ಭರಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ/5/ ಲಿಫ್ಟ್/ 2005-06 ದಿನಾಂಕ:31.08.2006.

**ಪ್ರಸ್ತಾವನೆ:**

ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ:31.08.2006ರ ಪತ್ರದಲ್ಲಿ ಕನ್ನಡ ಭವನದ ಚಾಲುಕ್ಯ ವಿಭಾಗದಲ್ಲಿ ಓಟಿಸ್ ಎಲಿವೇಟರ್ ಕಂಪನಿಯ ಲಿಫ್ಟ್ ಅಳವಡಿಸಿದ್ದು ಇದರ ವಾರ್ಷಿಕ ನಿರ್ವಹಣಾ ವೆಚ್ಚವಾಗಿ 2006-07ನೇ ಸಾಲಿಗೆ ಓಟಿಸ್ ಎಲಿವೇಟರ್ ಸಂಸ್ಥೆಗೆ ರೂ.45,000-00ಗಳನ್ನು ಭರಿಸಲು ಸರ್ಕಾರಿ ಆದೇಶ ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 100 ಕಸನಿ, 2006, ಬೆಂಗಳೂರು, ದಿನಾಂಕ:29ನೇ ನವೆಂಬರ್, 2006**

ಬೆಂಗಳೂರು ಜೆ.ಸಿ. ರಸ್ತೆ, ಕನ್ನಡ ಭವನದ ಚಾಲುಕ್ಯ ವಿಭಾಗದಲ್ಲಿ ಅಳವಡಿಸಿರುವ ಓಟಿಸ್ ಎಲಿವೇಟರ್ ಕಂಪನಿಯ ಲಿಫ್ಟ್‌ನ 2006-07ನೇ ಸಾಲಿನ ನಿರ್ವಹಣಾ ವೆಚ್ಚವಾಗಿ ರೂ.45,000-00 (ರೂ. ನಲವತ್ತೈದು ಸಾವಿರಗಳು ಮಾತ್ರ) ಗಳನ್ನು ಭರಿಸಲು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ. ಈ ಸಂಬಂಧ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4202-04-800-1-01-039 (ಯೋಜನೆ) ಇದರಡಿಯಲ್ಲಿ ನಯನ ರಂಗಮಂದಿರದ ನಿರ್ವಹಣೆಗಾಗಿ ನಿಗದಿಪಡಿಸಲಾದ ಮೊತ್ತದಲ್ಲಿ ಭರಿಸತಕ್ಕದ್ದು. ಈ ರೀತಿ ಭರಿಸುವಾಗ ಈ ಲೆಕ್ಕಶೀರ್ಷಿಕೆ ಅಡಿಯಲ್ಲಿ ಒದಗಿಸಿರುವ ಒಟ್ಟಾರೆ ಅನುದಾನವು ಯಾವುದೇ ಕಾರಣಕ್ಕೂ ಮೀರಬಾರದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರೀಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 1020 ಐಎಫ್ (ಬಿ.ಎ.) 2006 ದಿನಾಂಕ:07.11.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1755

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

## ಒಳಾಡಳಿತ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸೈನಿಕ ಮಂಡಳಿ ಪುರ್ನರಚಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರ ಆದೇಶ ಸಂಖ್ಯೆ, ಹೆಚ್ ಡಿ 92 ಕಸ್ಸೆಸೇ 2003, ಬೆಂಗಳೂರು, ದಿನಾಂಕ :16.9.2003.
2) ನಿರ್ದೇಶಕರು ಸೈನಿಕ ಕಲ್ಯಾಣ ಮತ್ತು ಪುರ್ನವಸತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ. ಸೈಕಪುಇ/23/ ಕರಾಸೈಮ/94-2006 ದಿನಾಂಕ 24ನೇ ಜುಲೈ 2006.

**ಪ್ರಸ್ತಾವನೆ:**

ಸರ್ಕಾರದ ಆದೇಶ ದಿನಾಂಕ :16.9.2003 ರಲ್ಲಿ ಓದಲಾಗಿರುವ ಕ್ರಮ ಸಂಖ್ಯೆ (1)ರಲ್ಲಿ ಕರ್ನಾಟಕ ರಾಜ್ಯ ಸೈನಿಕ ಮಂಡಳಿಯನ್ನು 3 ವರ್ಷಗಳ ಅವಧಿಗೆ ರಚಿಸಲಾಗಿತ್ತು.ಸದರಿ ಮಂಡಳಿಯ ಅವಧಿಯ ದಿನಾಂಕ:17ನೇ ಆಗಸ್ಟ್ 2006ಕ್ಕೆ ಮುಕ್ತಾಯಗೊಳ್ಳಲಿದೆ. ಆದ್ದರಿಂದ ನಿರ್ದೇಶಕರು ಸೈನಿಕ ಕಲ್ಯಾಣ ಮತ್ತು ಪುರ್ನವಸತಿ ಇಲಾಖೆ ಇವರ ಪತ್ರ ದಿನಾಂಕ 24ನೇ ಜುಲೈ 2006 ಓದಲಾಗಿರುವ ಕ್ರಮ ಸಂಖ್ಯೆ (2) ರಲ್ಲಿ ಕೇಂದ್ರಿಯ ಸೈನಿಕ ಮಂಡಳಿ ಭಾರತ ಸರ್ಕಾರದ ರಕ್ಷಣಾ ಇಲಾಖೆ ನವದೆಹಲಿ ಇವರ ಮಾರ್ಗಸೂಚಿಯಲ್ಲಿರುವಂತೆ ಕರ್ನಾಟಕ ರಾಜ್ಯ ಸೈನಿಕ ಮಂಡಳಿಯನ್ನು ಪುನಃ 3 ವರ್ಷಗಳ ಅವಧಿಗೆ ರಚಿಸುವಂತೆ ಸೈನಿಕ ಕಲ್ಯಾಣ ಮತ್ತು ಪುರ್ನವಸತಿ ಇಲಾಖೆ ನಿರ್ದೇಶಕರು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 80 ಕಸ್ಸೆಸೇ 2006 ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2006**

ಕರ್ನಾಟಕ ರಾಜ್ಯ ಸೈನಿಕ ಮಂಡಳಿಯನ್ನು ಪುರ್ನರಚಿಸಲು ಈ ಕೆಳಕಂಡ ವ್ಯಕ್ತಿಗಳನ್ನು 3 ವರ್ಷಗಳ ಅವಧಿಗೆ ದಿನಾಂಕ:18.8.2006 ರಿಂದ ಜಾರಿಗೆ ಬರುವಂತೆ ನೇಮಿಸಿದೆ.

| | | | |
|---|---|---|---|
| 1. | ಮುಖ್ಯಮಂತ್ರಿಗಳು | - | ಅಧ್ಯಕ್ಷರು |
| 2. | ಗೃಹ ಸಚಿವರು | - | ಹಿರಿಯ ಉಪಾಧ್ಯಕ್ಷರು |
| 3. | ಜನರಲ್ ಆಫೀಸರ್ ಕಮಾಂಡಿಂಗ್-ಇನ್-ಚೀಫ್ ಸದರನ್ ಕಮಾಂಡ್, ಪುಣೆ. | - | ಉಪಾಧ್ಯಕ್ಷರು |
| 4. | ಏರ್ ಆಫೀಸರ್ ಕಮಾಂಡಿಂಗ್-ಇನ್ -ಚೀಫ್ ಟ್ರೈನಿಂಗ್ ಕಮಾಂಡ್, ಐಎಎಫ್, ಬೆಂಗಳೂರು | - | ಉಪಾಧ್ಯಕ್ಷರು |
| 5. | ಫ್ಲ್ಯಾಗ್ ಆಫೀಸರ್ ಕಮಾಂಡಿಂಗ್-ಇನ್-ಚೀಫ್ ಸದರನ್ ನೇವಲ್ ಕಮಾಂಡ್, ಕೊಚ್ಚಿ | - | ಉಪಾಧ್ಯಕ್ಷರು |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಒಳಾಡಳಿತ ಇಲಾಖೆ. | - | ಪದನಿಮಿತ್ತ ಸದಸ್ಯರು |
| 7. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ. | - | ಪದನಿಮಿತ್ತ ಸದಸ್ಯರು |

8. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು - ಪದನಿಮಿತ್ತ ಸದಸ್ಯರು
ಶಿಕ್ಷಣ ಇಲಾಖೆ.
9. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು - ಪದನಿಮಿತ್ತ ಸದಸ್ಯರು
ನಗರಾಭಿವೃದ್ಧಿ ಇಲಾಖೆ.
10. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು - ಪದನಿಮಿತ್ತ ಸದಸ್ಯರು
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
11. ಸರ್ಕಾರದ ಕಾರ್ಯದರ್ಶಿಗಳು (ಪಿಸಿಎಎಸ್) - ಪದನಿಮಿತ್ತ ಸದಸ್ಯರು
ಒಳಾಡಳಿತ ಇಲಾಖೆ.
12. ನಿರ್ದೇಶಕರು - ಪದನಿಮಿತ್ತ ಸದಸ್ಯರು
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು.
13. ನಿರ್ದೇಶಕರು - ಪದನಿಮಿತ್ತ ಸದಸ್ಯರು
ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು.
14. ಕಮಾಂಡರ್ - ಪದನಿಮಿತ್ತ ಸದಸ್ಯರು
ಕರ್ನಾಟಕ ಮತ್ತು ಕೇರಳ ಉಪ ವಲಯ, ಬೆಂಗಳೂರು.
15. ಏರ್ ಆಫೀಸರ್ ಕಮಾಂಡಿಂಗ್ - ಪದನಿಮಿತ್ತ ಸದಸ್ಯರು
ಏರ್ ಫೋರ್ಸ್ ಸ್ಟೇಶನ್ ಜಾಲಹಳ್ಳಿ, ಬೆಂಗಳೂರು.
16. ನೇವಲ್ ಸ್ಟೇಶನ್ ಕಮಾಂಡರ್, ಬೆಂಗಳೂರು. - ಪದನಿಮಿತ್ತ ಸದಸ್ಯರು
17. ನಿರ್ದೇಶಕರು - ಪದನಿಮಿತ್ತ ಸದಸ್ಯರು
ಪುರ್ನವಸತಿ ದಕ್ಷಿಣ ವಲಯ, ಪುಣೆ
18. ಉಪ ಮಹಾ ನಿರ್ದೇಶಕರು - ಪದನಿಮಿತ್ತ ಸದಸ್ಯರು
ಕರ್ನಾಟಕ ಮತ್ತು ಕೇರಳ ಭರ್ತಿ ವಲಯ, ಬೆಂಗಳೂರು.
19. ನಿರ್ದೇಶಕರು - ಕಾರ್ಯದರ್ಶಿ
ಸೈನಿಕ ಕಲ್ಯಾಣ ಮತ್ತು ಪುರ್ನವಸತಿ ಇಲಾಖೆ, ಬೆಂಗಳೂರು.

**ಅಧಿಕಾರೇತರ ಸದಸ್ಯರು**

1. ಏರ್ ಮಾರ್ಷಲ್ (ನಿವೃತ್ತ) ಕೆ.ಸಿ. ಕಾರ್ಯಪ್ಪ, ಪಿ.ವಿ.ಎಸ್.ಎಮ್.
2. ವೈಸ್ ಆಡ್ಮಿರಲ್ (ನಿವೃತ್ತ) ಆರ್. ಎನ್. ಗಣೇಶ್, ಪಿ.ವಿ.ಎಸ್.ಎಮ್. ಎ.ವಿ.ಎಸ್.ಎಮ್., ಎನ್. ಎಮ್.
3. ಮೇಜರ್ ಜನರಲ್ (ನಿವೃತ್ತ) ಎಂ.ಸಿ. ನಂಜಪ್ಪ, ಎ.ವಿ.ಎಸ್. ಎಮ್**, ವೈ.ಎಸ್.ಎಮ್.
4. ಬ್ರಿಗೇಡಿಯರ್ (ನಿವೃತ್ತ) ಆರ್. ಇನಾಯತ್ ಉಲ್ಲಾ, ಎ.ವಿ.ಎಸ್. ಎಮ್, ವಿ.ಎಸ್.ಎಮ್.

ಕರ್ನಾಟಕ ರಾಜ್ಯ ಸೈನಿಕ ಮಂಡಳಿಯ ಅಧಿಕಾರೇತರ ಸದಸ್ಯರು ಕರ್ನಾಟಕ ನಾಗರೀಕ ಸೇವಾ ನಿಯಮದಲ್ಲಿ ವರ್ಗೀಕರಿಸಿರುವ ಅನುಬಂಧ- 'ಎ' ನಲ್ಲಿರುವಂತೆ ಪ್ರಯಾಣ ಭತ್ಯೆ ಮತ್ತು ತುಟ್ಟಿ ಭತ್ಯೆಗೆ ಅರ್ಹರಿರುತ್ತಾರೆ.

ಸಮಿತಿಯ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ " 2235-60-200-1-01 (ಕೋಡ್ ಸಂಖ್ಯೆ 041) ರಲ್ಲಿ ಸೈನಿಕ ಕಲ್ಯಾಣ ಮತ್ತು ಪುರ್ನವಸತಿ ಇಲಾಖೆಯ ವೆಚ್ಚಗಳು ಮತ್ತು ಪ್ರಯಾಣ ಖರ್ಚುಗಳಿಗಾಗಿ " ಬಿಡುಗಡೆ ಮಾಡಲಾದ ಅನುದಾನದ ಮೊತ್ತದಲ್ಲಿ, ಚಾಲ್ತಿಯಲ್ಲಿರುವ ಮತ್ತು ತರುವಾಯ ವರ್ಷದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೋಲಿಸ್ ಸಹಾಯಕ ಸೇವೆಗಳು)

**HOME SECRETARIAT**

**Sub :** Reconstitution of Karnataka Rajya Sainik Board.

**Read :** 1) Government Order No. HD 92 KSS 2003, dated 17.9.2003.
2) Director Sainik Welfare & Resettlement letter No. DSWR /23/ KRSB/1994- 06 Dated 24th July 2006.

**Preamble:**

The Government vide their order dated 17.9.2003 read at (1) above have reconstituted the Karnataka Rajya Ssinik Board for a period of 3 years and the tenure of this Board expired on 17th August 2006. Therefore, the Director, Department of Sainik Welfare and Resettlement, Bangalore vide his letter dated 24th July 2006 read at (2) above has requested the Government to reconstitute the Karnataka Rajya Sainik Board for a further period of three years as per the guidelines of Kendriya Sainik Board, Government of India, Ministry of Defence, New Delhi.

The proposal of the Director, Sainik Welfare and Resettlement has been examined by the Government and hence the following order.

**Government Order No HD 80 KSS 2006, Bangalore, Date :30th October, 2006**

The Government is pleased to re-constitute the Karnataka Rajya Sainik Board with the following personnel for a period of three years with effect from 18.8.2006.

| | | | |
|---|---|---|---|
| (A) | The Chief Minister | .... | President |
| (B) | Minister In-charge of Sainik Welfare Department. | ... | Senior Vice President |
| (C) | The General Officer Commanding -in-Chief Southern Command, Pune. | ... | Vice Present |
| (D) | The Air Officer Commanding -in-Chief, Training Command, LAF Bangalore. | ... | Vice Present |
| | | ... | Vice Present |
| (E) | The Flag Officer Commanding-in-Chief, Southern Naval Command, Kochi. | | |
| (F) | Principal Secretary to Government Home Department. | ... | Ex-Officio Member |
| (G) | Principal Secretary to Government Revenue Department. | ... | Ex-Officio Member |
| (H) | Principal Secretary to Government Education Department. | ... | Ex-Officio Member |
| (I) | Principal Secretary to Government Urban Development Department. | ... | Ex-Officio Member |
| (J) | Principal Secretary to Government Dept. of Personnel & Administrative Reforms. | ... | Ex-Officio Member |
| (K) | Secretary to Government (PCAS) Home Department. | ... | Ex-Officio Member |
| (L) | Director of Industries and Commerce Department, Bangalore. | ... | Ex-Officio Member |
| (M) | Director of Employment and Training, Bangalore. | ... | Ex-Officio Member |
| (N) | Commander Karnataka & Kerala Sub Area Bangalore. | ... | Ex-Officio Member |
| (O) | Air Officer Commanding Air Force Station, Jalahalli Bangalore. | ... | Ex-Officio Member |
| (P) | Naval Station Commander Bangalore. | ... | Ex-Officio Member |
| (Q) | Director Resettlement Southern Zone, pune. | ... | Ex-Officio Member |
| (R) | Deputy Director General Recruiting Karnataka & Kerala Recruiting Zone Bangalore. | ... | Ex-Officio Member |
| (S) | Director Department of Sainik Welfare & Resettlement. | ... | Secretary |

**NON- OFFICIAL MEMBERS:**

1) Air Marshal (Retd) K.C. Cariappa, PVSM, VM
2) Vice Admiral (Retd) RN Ganesh, PVSM, AVSM, NM
3) Major General (Retd) MC Nanjappa, AVSM **, YSM
4) Brigadier (Retd) R. Enaythullaa, AVSM, VSM

The Non Official Members of the Karnataka Rajy Sainik Board are classified under Lisrt 'A' of Annexure to KCSRs for the purpose of TA/DA.

The Expenditure of the Committee may be met out of the sanctioned grant under the Head "2235-60-200-1-01 (Code No. 041), Director Department of Sainik Welfare and Resettlement Establishment charges, Travel Expenses", during the current and subsequent years.

By Order and in the name of the Governor of Karnataka,

**K. KRISHNA MURTHY**

P.R. 1603

Under Secretary to Government,
Home Department.
(Police Auxiliary Services)

## ವಸತಿ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ, ಚನ್ನಗಿರಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ವಇ/ 42/ ಹೆಚ್ಎಎಂ/ 1998, ದಿನಾಂಕ:10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ದಾವಣಗೆರೆ ಜಿಲ್ಲೆ, ಚನ್ನಗಿರಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 169 ಹೆಚ್ಎಎಸ್ 2006, ಬೆಂಗಳೂರು, ದಿನಾಂಕ:24ನೇ ನವೆಂಬರ್, 2006**

ಮೇಲ್ಕಂಡ ಸಂದರ್ಭದಲ್ಲಿ ದಾವಣಗೆರೆ ಜಿಲ್ಲೆ, ಚನ್ನಗಿರಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಸಿ.ಬಿ. ಜಗದೀಶ್ ಬಿನ್ ಹೆಚ್.ಭೀಮಪ್ಪ,
ಎ.ಡಿ. ಕಾಲೋನಿ ಚನ್ನಗಿರಿ. — ಸದಸ್ಯರು
2. ಶ್ರೀ ಕೆ. ಸುರೇಶ್ ಬಿನ್ ಸಿದ್ದಪ್ಪ,
ಬೀರಲಿಂಗೇಶ್ವರ ದೇವಸ್ಥಾನ ಎದುರು, ಕುರುಬರ ಬೀದಿ ಚನ್ನಗಿರಿ. — ಸದಸ್ಯರು
3. ಶ್ರೀ ಸೈಯದ್ ಮುಜೀಬ್ ಬಿನ್ ಮೀರ್ ದಸ್ತಗೀರ್ ಸಾಬ್ — ಸದಸ್ಯರು
ಲಷ್ಕರ್ ಮೊಹಲ್ಲಾ, ಚನ್ನಗಿರಿ.
4. ಶ್ರೀಮತಿ ಕೆ.ಪಿ.ಎಂ. ಕುಸುಮಾ — ಸದಸ್ಯರು
ಕೊಂ ಲೇಟ್ ವಾಸುದೇವಯ್ಯ, ಕನ್ನಿಕಾಪರಮೇಶ್ವರಿ ದೇವಸ್ಥಾನ ರಸ್ತೆ, ಚನ್ನಗಿರಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1692

**ರಂಗಮ್ಮ**

ಪೀಠಾಧಿಕಾರಿ-2, ವಸತಿ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದ ರೈತರಿಗೆ ಸಹಕಾರಿ ಕೃಷಿ ಪತ್ತಿನ ಸಂಸ್ಥೆಗಳು ಶೇಕಡಾ 4ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ನೀಡುವ ಬಗ್ಗೆ.

**ಓದಲಾಗಿದೆ:** ಆದೇಶ ಸಂಖ್ಯೆ: ಸಿಒ 41 ಸಿಎಲ್ಎಸ್ 2006 ದಿನಾಂಕ:15.05.2006.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ದಿನಾಂಕ:01.04.2006 ರಿಂದ ರಾಜ್ಯದ ರೈತರಿಗೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳನ್ನು ಸಹಕಾರಿ ಕೃಷಿ ಪತ್ತಿನ ಸಂಸ್ಥೆಗಳ ಮೂಲಕ ಶೇಕಡಾ 4ರ ಬಡ್ಡಿ ದರದಲ್ಲಿ ಒದಗಿಸಲು ಕೆಲವು ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ. ಸದರಿ ಆದೇಶದ ಪ್ರಕಾರ ಸಾಲದ ಮಿತಿಯು ರೂ.3.00 ಲಕ್ಷಗಳಿಗೆ ಮೀರಿದಲ್ಲಿ ಹಾಗೂ ಸಾಲವು ಸುಸ್ತಿಯಾದಲ್ಲಿ ಸಾಲ ಮಂಜೂರಾದ ದಿನಾಂಕದಿಂದ ರೈತರು ಸಾಮಾನ್ಯ ಬಡ್ಡಿ ದರವನ್ನು ಕೊಡಬೇಕೆಂದು ವಿಧಿಸಲಾಗಿರುತ್ತದೆ. ರೂ.3.00 ಲಕ್ಷಗಳ ಮಿತಿಯಿಂದಾಗಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳಿಗೆ ಈ ಸೌಲಭ್ಯ ಇಲ್ಲವಾಗಿ ಸಣ್ಣ ಮತ್ತು ದೊಡ್ಡ ರೈತರಿಗೆ ತಾರತಮ್ಯ ಉಂಟಾಗಲು ಕಾರಣವಾಗಿದ್ದು, 3.00 ಲಕ್ಷಗಳ ಮಿತಿಯನ್ನು ತೆಗೆದುಹಾಕಬೇಕೆಂದು ಮತ್ತು ರೈತರು ಅನೇಕ ಕಾರಣಗಳಿಂದ ಮುಖ್ಯವಾಗಿ ಬರ ಪರಸ್ಥಿತಿ ಬೆಲೆ ಕುಸಿತ, ಬೆಳೆ ಹಾನಿ ಇತ್ಯಾದಿ ವಿಷಮ ಪರಿಸ್ಥಿತಿಗಳಲ್ಲಿ ಸಕಾಲದಲ್ಲಿ ಸಾಲವನ್ನು ಮರುಪಾವತಿಸಲು ಸಾಧ್ಯವಾಗದೆ ಇರುವುದರಿಂದ ಸುಸ್ತಿಯಾದಲ್ಲಿ ಸಾಲ ಮಂಜೂರಾದ ದಿನಾಂಕದಿಂದ ಹೆಚ್ಚಿನ ಬಡ್ಡಿದರ ಪಾವತಿಸಬೇಕೆಂಬ ಷರತ್ತು ಸಹ ನ್ಯಾಯಸಮ್ಮತವಾಗಿರುವುದಿಲ್ಲವೆಂದು ತಿಳಿಸಿ, ಸದರಿ ಷರತ್ತುಗಳನ್ನು ತೆಗೆದುಹಾಕಬೇಕೆಂದು ಸರ್ಕಾರಕ್ಕೆ ಅನೇಕ ಮನವಿಗಳು ಬಂದಿರುತ್ತವೆ. ಅಲ್ಲದೆ ಭಾರತ ಸರ್ಕಾರದ ಯೋಜನೆಯ ಪ್ರಕಾರ ರೈತರಿಗೆ ಶೇಕಡಾ 07ರ ಬಡ್ಡಿ ದರದಲ್ಲಿ ಸಾಲ ನೀಡಬೇಕಿದ್ದು ಸದರಿ ಯೋಜನೆಯಲ್ಲಿಯೂ ಸಹ ಸುಸ್ತಿಯಾದಲ್ಲಿ ಸಾಲ ಮಂಜೂರಾದ ದಿನಾಂಕದಿಂದ ಹೆಚ್ಚಿನ ಬಡ್ಡಿ ದರ ವಿಧಿಸಬೇಕೆಂಬ ಷರತ್ತು ಇರುವುದಿಲ್ಲ. ಸದರಿ ಮನವಿಗಳನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಇ 41 ಸಿಎಲ್ಎಸ್ 2006, ಬೆಂಗಳೂರು, ದಿನಾಂಕ:21ನೇ ನವೆಂಬರ್, 2006**

ಮೇಲಿನ ಪರಿಸ್ಥಿತಿಯಲ್ಲಿ ಸರ್ಕಾರವು ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ರೈತರಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಅಲ್ಪಾವಧಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳನ್ನು ಒದಗಿಸಲು ಮಂಜೂರಾತಿ ನೀಡಿರುವ ಮೇಲೆ ಓದಲಾದ ಆದೇಶದಲ್ಲಿ ಕೆಳಕಂಡಂತೆ ಮಾರ್ಪಾಡು ಮಾಡುತ್ತದೆ.

1) 4ನೇ ಷರತ್ತನ್ನು ಕೈಬಿಡಲಾಗಿದೆ.

2) 5ನೇ ಷರತ್ತಿನಲ್ಲಿ "ಒಂದು ವೇಳೆ ರೈತರು ಸಕಾಲದಲ್ಲಿ ಸಾಲವನ್ನು ಮರುಪಾವತಿಸದೆ ಸುಸ್ತಿ ಆದಲ್ಲಿ **"ಸಾಲ ಪಡೆದ ದಿನಾಂಕದಿಂದ"** ಎಂಬ ಪದಗಳಿಗೆ ಬದಲಾಗಿ "ಒಂದು ವೇಳೆ ರೈತರು ಸಕಾಲದಲ್ಲಿ ಸಾಲವನ್ನು ಮರುಪಾವತಿಸದೆ ಸುಸ್ತಿಯಾದಲ್ಲಿ ಸುಸ್ತಿಯಾದ ದಿನಾಂಕದಿಂದ" ಎಂದು ಪ್ರತಿಯೋಜಿಸಲಾಗಿದೆ.

3) ಮೇಲೆ ಓದಲಾದ ಆದೇಶದ ಅನುಬಂಧದಲ್ಲಿ

(ಅ) ಐಟಂ ನಂ.7ರಲ್ಲಿ ಮೊದಲನೆ ಕಂಡಿಕೆಯ ಕೊನೆ ಸಾಲಿನಲ್ಲಿ "from the date of sanction of loans" ಎಂಬ ಪದಗಳಿಗೆ ಬದಲಾಗಿ "from the date of default" ಎಂದು ಪ್ರತಿಯೋಜಿಸಲಾಗಿದೆ.

(ಆ) ಐಟಂ ನಂ.8 ಅನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 1698

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಂಕದ: ಮುಇಂ: ರಶಾ: ಎಇ-4: ಉಡುಪಿ: ಗ್ರಾರ:ಜಿಮುಕ: ಮೇಲ್ದರ್ಜೆ 2006-07 ದಿನಾಂಕ:05.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನಲ್ಲಿ ಪಡುಕೆರೆ ರಸ್ತೆಯ ಉದ್ಯಾವರ ನದಿಗೆ ಅಡ್ಡಲಾಗಿ ಹಾಗೂ ಪರೀಕ-ಬೆಳ್ಳಂಪಳ್ಳಿ ರಸ್ತೆಯಲ್ಲಿ ಸುವರ್ಣ ನದಿಗೆ ಅಡ್ಡಲಾಗಿ ಒಟ್ಟು 2 ಸೇತುವೆಗಳನ್ನು ನಿರ್ಮಾಣ ಮಾಡಲು ಅನುಮೋದನೆ ದೊರೆತಿದ್ದು, ಈ ಸೇತುವೆಗಳನ್ನು ನಿರ್ಮಾಣ ಮಾಡಲು ಅನುಕೂಲವಾಗುವಂತೆ ಉಡುಪಿ ತಾಲ್ಲೂಕಿನ ಉಳಿಯಾರಗೋಳಿ ಪಡುಕೆರೆ-ಮಲ್ಪೆ ರಸ್ತೆ ಮತ್ತು ಅತ್ರಾಡಿ- ಪರೀಕ-ಬೆಳ್ಳಂಪಳ್ಳಿ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 291 ಸಿಆರ್ಎಂ 2006, ಬೆಂಗಳೂರು, ದಿನಾಂಕ:30.11.2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರವಾಗಿ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ಉಳಿಯಾರುಗೋಳಿ-ಪಡುಕೆರೆ-ಮಲ್ಪೆ ರಸ್ತೆ. | 13.40 |
| 2. | ಅತ್ರಾಡಿ-ಪರೀಕ-ಬೆಳ್ಳಂಪಳ್ಳಿ ರಸ್ತೆ. | 4.50 |
| | **ಒಟ್ಟು** | 17.90 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್. 1703

**ವಿಷಯ:** ಉಡುಪಿ ಜಿಲ್ಲೆ ಸಾಸ್ತಾನ-ಪಾಂಡೇಶ್ವರ-ಬೆಣ್ಣೆ ಕುದ್ರು ಗ್ರಾಮೀಣ (ಮೀನುಗಾರಿಕಾ) ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕ(ದ):ಮೇಘ:ಮೀಇ: ರಸ್ತೆ: ಮೇಲ್ದರ್ಜೆ: ಸಇಂ: 2006-07 ದಿನಾಂಕ:15.09.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಉಡುಪಿ ಜಿಲ್ಲೆಯ ಸಾಸ್ತಾನ-ಪಾಂಡೇಶ್ವರ-ಬೆಣ್ಣೆ ಕುದ್ರು-ಬಾರ್ಕೂರು ರಸ್ತೆ ಸೇರುವ 5.50 ಕಿ.ಮೀ. ಮೀನುಗಾರಿಕಾ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 294 ಸಿಆರ್ಎಂ 2006, ಬೆಂಗಳೂರು, ದಿನಾಂಕ:30.11.2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಉಡುಪಿ ಜಿಲ್ಲೆಯ ಸಾಸ್ತಾನ-ಪಾಂಡೇಶ್ವರ-ಬೆಣ್ಣೆ ಕುದ್ರು-ಬಾರ್ಕೂರು ರಸ್ತೆ ಸೇರುವ 5.50 ಕಿ.ಮೀ. ಮೀನುಗಾರಿಕಾ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರವಾಗಿ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್. 1704

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಸಣ್ಣ ನೀರಾವರಿ ವಿಭಾಗ, ತುಮಕೂರು ಇಲ್ಲಿನ ಕಾಮಗಾರಿಗಳಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ಕರ್ನಾಟಕ ಉಪ ಲೋಕಾಯುಕ್ತರಿಂದ ತನಿಖೆ ನಡೆಸುವ ಕುರಿತು.

**ಓದಲಾಗಿದೆ:** 1. ಮಾನ್ಯ ಸಣ್ಣ ನೀರಾವರಿ ಸಚಿವರ ಟಿಪ್ಪಣಿ ದಿನಾಂಕ:15.12.1999.

2. ಸರ್ಕಾರದ ಆದೇಶ ಸಂಖ್ಯೆ: ನೀಇ/ 160/ ಸೇಇವಿ/ 99 ದಿನಾಂಕ:18.12.1999.

3. ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ತುಮಕೂರುರವರ ಪತ್ರ ಸಂಖ್ಯೆ: ಜಿಪಂ/ ಅಭಿವೃದ್ಧಿ/ 168/ 99-2000 ದಿನಾಂಕ:03.01.2000.

4. ಸರ್ಕಾರದ ಪತ್ರ ಸಂಖ್ಯೆ: ನೀಇ 160 ಸೇಇವಿ ದಿನಾಂಕ:25.01.2000.

5. ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಸನೀವೃ/ ಸೇಇವಿ/ ಸಿ-2/ 1999-2000, ದಿನಾಂಕ:10.02.2000.

6. ಸರ್ಕಾರದ ಪತ್ರ ಸಂಖ್ಯೆ: ನೀಇ 160 ಸೇಇವಿ 99 ದಿನಾಂಕ:18.04.2000.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ಅಂದಿನ ಮಾನ್ಯ ಸಣ್ಣ ನೀರಾವರಿ ರಾಜ್ಯ ಸಚಿವರು ದಿನಾಂಕ:24.11.1999 ರಂದು ತುಮಕೂರು ಸಣ್ಣ ನೀರಾವರಿ ವಿಭಾಗದ ಪ್ರಗತಿ ಪರಿಶೀಲನಾ ಸಭೆ ನಡೆಸಿದ ಸಂದರ್ಭದಲ್ಲಿ ಆ ವಿಭಾಗದಲ್ಲಿ ವ್ಯಾಪಕವಾದ ಅವ್ಯವಹಾರ ಮತ್ತು ಕರ್ತವ್ಯ ನಿರ್ಲಕ್ಷತೆ ಇರುವುದನ್ನು ಗಮನಿಸಿ ಈ ಬಗ್ಗೆ ತುಮಕೂರು ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಇವರಿಗೆ ಸಮಗ್ರ ತನಿಖೆ ನಡೆಸಿ 15 ದಿನಗಳೊಳಗೆ ವರದಿ ಸಲ್ಲಿಸುವಂತೆ ಸೂಚಿಸಿದ್ದರು.

ಅದರಂತೆ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ತುಮಕೂರು ಇವರನ್ನು ತನಿಖಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಆದರೆ ಸದರಿ ಆದೇಶದಲ್ಲಿ ನಿರ್ದಿಷ್ಟವಾದ ಆಪಾದನೆಗಳು/ ಅವ್ಯವಹಾರಗಳು ಮತ್ತು ಯಾವ ಅವಧಿಗೆ ಸಂಬಂಧಿಸಿದ ಅವ್ಯವಹಾರಗಳು ಎಂಬ ಬಗ್ಗೆ ವಿವರಗಳು ಇಲ್ಲದಿರುವುದರಿಂದ ಹಾಗೂ ಕೆಲವು ತಾಂತ್ರಿಕ ಕಾರಣಗಳಿಂದ ತನಿಖೆಯನ್ನು ನಡೆಸಲು ಸಾಧ್ಯವಾಗಲಿಲ್ಲವೆಂದು ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ತುಮಕೂರು ರವರು ಮೇಲೆ ಓದಲಾದ (3)ರ ಪತ್ರದಲ್ಲಿ ಉತ್ತರಿಸಿರುತ್ತಾರೆ. ನಂತರ ಮೇಲೆ (4)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಈ ತನಿಖೆಯನ್ನು ನಡೆಸಲು ಒಬ್ಬ ತಾಂತ್ರಿಕ ಸಹಾಯಕರ ಸಹಾಯ ನೀಡಲು ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಂಗಳೂರು ಇವರಿಗೆ ನಿರ್ದೇಶನ ನೀಡಲಾಗಿತ್ತು.

ಮೇಲೆ ಓದಲಾದ (5) ರ ಪತ್ರದಲ್ಲಿ ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಂಗಳೂರು ರವರು ಸಣ್ಣ ನೀರಾವರಿ ವಿಭಾಗ, ತುಮಕೂರು ಇಲ್ಲಿನ ಕಾಮಗಾರಿಗಳಲ್ಲಿನ ಅವ್ಯವಹಾರಗಳ ಬಗ್ಗೆ ತನಿಖೆ ನಡೆಸಲು ಇದೇ ವಿಭಾಗದ ತಾಂತ್ರಿಕ ಸಹಾಯಕರ ನೆರವನ್ನು ನೀಡುವುದು ಸಮಂಜಸವಲ್ಲವೆಂದು, ಒಂದು ವೇಳೆ ಬೇರೆ ಕೇಂದ್ರ ಸ್ಥಾನದಲ್ಲಿರುವ ತಾಂತ್ರಿಕ ಸಹಾಯಕರ ಸೇವೆಯನ್ನು ನೀಡಿದಲ್ಲಿ ಅವರು ಪದೇ ಪದೇ ತುಮಕೂರಿಗೆ ಪ್ರಯಾಣ ಮಾಡಬೇಕಾಗಿರುವುದರಿಂದ ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸಲು ತೊಂದರೆಯಾಗುತ್ತದೆ ಎಂಬ ಕಾರಣದ ಮೇಲೆ ತುಮಕೂರು ಕೇಂದ್ರ ಸ್ಥಾನದಲ್ಲಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ತಾಂತ್ರಿಕ ಸಹಾಯಕರ ಸೇವೆಯನ್ನು ಪಡೆದು ತನಿಖೆ ನಡೆಸಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ತುಮಕೂರು ರವರಿಗೆ ಸೂಚಿಸುವಂತೆ ಅಧೀಕ್ಷಕ ಇಂಜಿನಿಯರ್ ರವರು ಕೋರಿರುತ್ತಾರೆ. ಇದನ್ನು ಪರಿಶೀಲಿಸಿ ಮೇಲೆ ಓದಲಾದ (6)ರ ಸರ್ಕಾರಿ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ತುಮಕೂರು ರವರಿಗೆ ಸೂಕ್ತ ಮಾಹಿತಿ ನೀಡಲಾಗಿದೆ. ಆದರೆ ಈ ತನಕ ಈ ಕುರಿತು ವರದಿ ಬಂದಿರುವುದಿಲ್ಲ.

ಮೇಲ್ಕಂಡ ಘಟನಾವಳಿಗಳ ಪರಿಶೀಲನೆಯಿಂದ ಒಂದಲ್ಲ ಒಂದು ಕಾರಣಕ್ಕೆ ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳು ಮತ್ತು ಅಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ತುಮಕೂರು ಇವರು ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲು ಪರೋಕ್ಷ ಪ್ರಯತ್ನ ಮಾಡಿರುವುದು ಗೋಚರವಾಗಿರುವುದರಿಂದ ಈ ಆಪಾದನೆಗಳ ಗುರುತರ ಅವ್ಯವಹಾರಗಳ ಮಾಹಿತಿ ಇಲ್ಲದೇ ಇದ್ದರೂ ಹಾಗೂ ಅವ್ಯವಹಾರಗಳು ಯಾವ ಅವಧಿಗೆ ಸಂಬಂಧಿಸಿದೆ ಎಂಬ ಮಾಹಿತಿಯು ಸಹ ಇಲ್ಲದೆ ಇದ್ದರೂ ಆಗಿನ ಮಾನ್ಯ ಸಚಿವರು ನವೆಂಬರ್ 99ರಲ್ಲಿ ತುಮಕೂರು ಸಣ್ಣ ನೀರಾವರಿ ವಿಭಾಗದ ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸಿರುವುದರಿಂದ 98-99 ಮತ್ತು 99-2000 ಸಾಲಿನ ಸಣ್ಣ ನೀರಾವರಿ ವಿಭಾಗ, ತುಮಕೂರು ಇಲ್ಲಿನ ಕಾಮಗಾರಿಗಳ ಬಗ್ಗೆ ಸಮಗ್ರ ತನಿಖೆ ನಡೆಸಲು ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ-7 (2)(ಎ) ರಡಿ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 37 ಸೇಇವಿ 2006, ಬೆಂಗಳೂರು, ದಿನಾಂಕ:28ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸಣ್ಣ ನೀರಾವರಿ ವಿಭಾಗ, ತುಮಕೂರು ವಿಭಾಗದ 98-99 ಮತ್ತು 99-2000 ಸಾಲಿನಲ್ಲಿ ಕೈಗೊಳ್ಳಲಾದ ಕಾಮಗಾರಿಗಳಲ್ಲಿ ನಡೆದಿದೆಯೆನ್ನಲಾದ ಅವ್ಯವಹಾರಗಳ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 7(2)(ಎ)ರಡಿ ಸಮಗ್ರ ತನಿಖೆ ನಡೆಸಿ ವರದಿ ಸಲ್ಲಿಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1705

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶ್ರೀ ಆರ್.ಸಿ. ಶಿವಪೂಜಿ, ನೋಟರಿ, ಬಿಜಾಪುರ, ಇವರ ವೃತ್ತಿ ಪ್ರಮಾಣ ಪತ್ರ ನವೀಕರಣಗೊಳಿಸುವ ಬಗ್ಗೆ.

**ಓದಲಾಗಿದೆ:**1) ಬಿಜಾಪುರದ ಬಾರ್ ಅಸೋಸಿಯೇಶನ್ ಸದಸ್ಯರ ದಿನಾಂಕ:04.08.1999ರ ಮನವಿ.

2) ಸರ್ಕಾರಿ ಆದೇಶ ಸಂಖ್ಯೆ: ಲಾ 178 ಎಲ್‌ಸಿಎಲ್ 99 ದಿನಾಂಕ:09.12.1999.

3) ಸರ್ಕಾರಿ ಆದೇಶ ಸಂಖ್ಯೆ: ಲಾ 118 ಎಲ್‌ಸಿಎಲ್ 01 ದಿನಾಂಕ:17.01.2003.

4) ಸರ್ಕಾರಿ ಆದೇಶ ಸಂಖ್ಯೆ: ಲಾ 118 ಎಲ್‌ಸಿಎಲ್ 01 ದಿನಾಂಕ:06.10.2003.

5) ಪತ್ರ ಸಂಖ್ಯೆ: ಸಿಪಿಎನ್: 5120: 2005 ದಿನಾಂಕ:05.09.2005.

**ಪ್ರಸ್ತಾವನೆ:**

ಬಾರ್ ಅಸೋಸಿಯೇಷನ್, ಬಿಜಾಪುರ ಇದರ ಕೆಲವು ಸದಸ್ಯರು ಶ್ರೀ ಆರ್.ಸಿ. ಶಿವಪೂಜಿ, ನೋಟರಿ, ಬಿಜಾಪುರ ಇವರು ಸಹ ನೋಟರಿ ವೃತ್ತಿಗೆ ಸಂಬಂಧಿಸಿದಂತೆ ಕೆಲವು ಅವ್ಯವಹಾರದಲ್ಲಿ ತೊಡಗಿರುವುದಾಗಿ ದೂರು ಸಲ್ಲಿಸಿದ್ದರು. ಆ ಕುರಿತಂತೆ ವಿಚಾರಣೆ ನಡೆಸಲು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಮಧ್ಯೆ ಶ್ರೀ ಆರ್.ಸಿ. ಶಿವಪೂಜಿ ಇವರು ನೋಟರಿ ಪ್ರಮಾಣ ಪತ್ರ ನವೀಕರಿಸುವಂತೆ ಮನವಿ ಸಲ್ಲಿಸಿದ್ದರು. ಆದರೆ ಸದರಿ ನೋಟರಿ ವಿರುದ್ಧ ವಿಚಾರಣೆ ಬಾಕಿ ಇದ್ದ ಹಿನ್ನೆಲೆಯಲ್ಲಿ ಅವರ ನೋಟರಿ ಪ್ರಮಾಣ ಪತ್ರವನ್ನು ನವೀಕರಿಸಿರಲಿಲ್ಲ.

ಶ್ರೀ ಆರ್.ಸಿ.ಶಿವಪೂಜಿ, ಇವರು ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:15161: 2002 ಸಲ್ಲಿಸಿದ್ದು ನ್ಯಾಯಾಲಯ ದಿನಾಂಕ:03.01.2002ರಂದು ಅವರ ಮನವಿಯನ್ನು ಪರಿಗಣಿಸಲು ಆದೇಶಿಸಿತ್ತು.

ಆ ಮೇರೆಗೆ ಶ್ರೀ ಆರ್.ಸಿ. ಶಿವಪೂಜಿ, ಇವರ ನೋಟರಿ ಪ್ರಮಾಣ ಪತ್ರವನ್ನು ನವೀಕರಿಸಬಹುದೆಂದು ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ನಮೂದಿಸಿದ್ದರೂ ನೋಟರಿ ಅಧಿನಿಯಮ (1952)ರ ಕಲಂ 9(1)ನರನು ಅವರು ಉಲ್ಲಂಘಿಸಿರುವುದಾಗಿ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಬಿಜಾಪುರ ಇವರು ತಿಳಿಸಿದ ಹಿನ್ನೆಲೆಯಲ್ಲಿ ಅವರನ್ನು ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ನೋಟರಿ ವೃತ್ತಿಯಿಂದ ತೆಗೆದು ಹಾಕಲಾಗಿತ್ತು.

ಇದರ ವಿರುದ್ಧ ಸದರಿ ನೋಟರಿ ಉಚ್ಚನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 10443/ 2005 ಸಲ್ಲಿಸಿದ್ದು ಉಚ್ಚ ನ್ಯಾಯಾಲಯವು ದಿನಾಂಕ:02.06.2005ರ ಮಧ್ಯಂತರ ಆದೇಶದಲ್ಲಿ ತಡೆಯಾಜ್ಞೆ ನೀಡಿರುತ್ತದೆ. ಆದರೆ ಇದುವರೆಗೂ ಅಂತಿಮ ಆದೇಶವಾಗಿರುವುದಿಲ್ಲ.

ಈ ಮಧ್ಯೆ ಮೇಲೆ (5)ರಲ್ಲಿ ಓದಲಾದ ಪತ್ರದೊಂದಿಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರು ವಿಚಾರಣಾ ವರದಿ ಸಲ್ಲಿಸಿದ್ದು ಆ ಪ್ರಕಾರ ಶ್ರೀ ಆರ್.ಸಿ. ಶಿವಪೂಜಿ ಇವರ ವಿರುದ್ಧದ ದೂರುಗಳಲ್ಲಿ ಸತ್ಯಾಂಶವಿರುವುದಾಗಿ ಕಂಡು ಬಂದಿರುವುದಿಲ್ಲ. ಆದರೆ ಶ್ರೀಯುತರು ನೋಟರಿ ಅಧಿನಿಯಮ (1952)ದ ಕಲಂ 9(1)ನ್ನು ಉಲ್ಲಂಘಿಸಿರುವುದನ್ನು ಗಂಭೀರವಾಗಿ ಪರಿಗಣಿಸಲಾಗಿದೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 118 ಎಲ್‌ಸಿಎಲ್ 2001, ಬೆಂಗಳೂರು, ದಿನಾಂಕ:28ನೇ ನವೆಂಬರ್, 2006**

ಶ್ರೀ ಆರ್.ಸಿ. ಶಿವಪೂಜಿ, ನೋಟರಿ, ಬಿಜಾಪುರ ಇವರ ವೃತ್ತಿ ಪ್ರಮಾಣ ಪತ್ರವನ್ನು ದಿನಾಂಕ:19.07.2001ರಿಂದ 30.07.2006ರ ವರೆಗೆ ನವೀಕರಿಸಿ ಅವರನ್ನು ನೋಟರಿ ಕರ್ತವ್ಯಗಳಿಂದ ವಿಮುಕ್ತಿಗೊಳಿಸಲು ಸರ್ಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲಾ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 1707

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಚನೆ ಕುರಿತು ಸಾರ್ವಜನಿಕರಿಂದ ಸಲಹೆ/ ಆಕ್ಷೇಪಣೆಗಳನ್ನು ಪರಿಶೀಲಿಸಲು ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಯುಡಿಡಿ 92 ಎಂಎನ್‌ವೈ 06 ದಿನಾಂಕ:02.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:02.11.2006ರ ಅಧಿಸೂಚನೆ ಮೂಲಕ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಚಿಸುವ ಮೂಲಕ ರಸ್ತೆ ಮತ್ತು ಸಾರಿಗೆ, ನೀರು ಸರಬರಾಜು, ಘನ ತ್ಯಾಜ್ಯ ವಿಲೇವಾರಿ ನಿರ್ವಹಣೆ ಮುಂತಾದ ಮೂಲಭೂತ ವ್ಯವಸ್ಥೆಗಳ ಅಭಿವೃದ್ಧಿಯಲ್ಲಿನ ಸುಧಾರಣೆ ಮತ್ತು ಸಮನ್ವಯತೆ, ನಗರ ನಾಗರೀಕ ಸೌಲಭ್ಯಗಳ ಗುಣಮಟ್ಟದ ಉನ್ನತೀಕರಣ, ಸೇವೆಗಳ ನಿರ್ವಹಣೆಯಲ್ಲಿ ಉತ್ತಮ ಸಮನ್ವಯತೆ ಮತ್ತು ವಿವಿಧ ನಿಯಮಗಳು/ ನಿಬಂಧನೆಗಳು ಪರಿಣಾಮಕಾರಿ ಜಾರಿಗಾಗಿ ಆಡಳಿತ ಸಾಮರ್ಥ್ಯ ಹೆಚ್ಚಿಸುವುದು, ಹಾಗೂ ಸಿಬ್ಬಂದಿ ಮೇಲಿನ ವೆಚ್ಚದ ಗರಿಷ್ಠ ನಿರ್ವಹಣೆ ಮಾಡುವ ಉದ್ದೇಶ ಕುರಿತು ಪ್ರಸ್ತಾಪಿಸಲಾಗಿದೆ. ಅದರಂತೆ, ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ 1976ರ 3ನೇ ಕಲಂದೊಂದಿಗೆ ಓದಲಾದ ಕಲಂ 4ರ ಉಪ ನಿಯಮ ಎ(1)ರ ಪ್ರಕಾರ ಹಾಲಿ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಹೊಂದಿಕೊಂಡಿರುವ 07 ನಗರಸಭೆಗಳು, 01 ಪುರಸಭೆ ಮತ್ತು 111 ಗ್ರಾಮಗಳನ್ನು ಸೇರ್ಪಡೆ ಮಾಡುವ ಮೂಲಕ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಚಿಸಲು ಉದ್ದೇಶಿಸಲಾಗಿದೆಯೆಂದು ತಿಳಿಯಪಡಿಸಲಾಗಿದ್ದು, ಸಾರ್ವಜನಿಕರಿಂದ ಸದರಿ ಅಧಿಸೂಚನೆ ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಅವಕಾಶ ಒದಗಿಸಲಾಗಿದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಚನೆಯ ಕುರಿತು ಸಾರ್ವಜನಿಕರಿಂದ ಸಾಕಷ್ಟು ಸಲಹೆ ಸೂಚನೆಗಳು, ಆಕ್ಷೇಪಣೆಗಳು ಸಲ್ಲಿಸಲ್ಪಡುತ್ತಿದ್ದು, ಅವುಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅಗತ್ಯ ಕ್ರಮ ಕೈಗೊಳ್ಳುವ ಬಗ್ಗೆ ಸರ್ಕಾರಕ್ಕೆ ಸೂಕ್ತ ಶಿಫಾರಸ್ಸುಗಳನ್ನು ಮಾಡಲು ಒಂದು ಸಮಿತಿಯನ್ನು ರಚಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 86 ಎಂಎಲ್‌ಆರ್ 2006, ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಯುಡಿಡಿ 92 ಎಂಎನ್‌ವೈ 2006, ದಿನಾಂಕ:02.11.2006ರನ್ವಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಚನೆ ಕುರಿತು ಬಾಧಿತರಾಗುವ ಸಾರ್ವಜನಿಕರಿಂದ ಸಲ್ಲಿಸಲ್ಪಡುವ ಎಲ್ಲಾ ಸಲಹೆ ಸೂಚನೆಗಳು ಮತ್ತು ಆಕ್ಷೇಪಣೆಗಳನ್ನು ನಿಯಮಗಳನುಸಾರ ಕೂಲಂಕುಷವಾಗಿ ಪರಿಶೀಲಿಸಿ ಅಗತ್ಯ ಕ್ರಮಗಳಿಗಾಗಿ ಸರ್ಕಾರಕ್ಕೆ ದಿನಾಂಕ:15.12.2006 ರೊಳಗಾಗಿ ಸೂಕ್ತ ಶಿಫಾರಸ್ಸುಗಳನ್ನು ಮಾಡಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

1. ನಿರ್ದೇಶಕರು, ಪೌರಾಡಳಿತ ಇಲಾಖೆ, ಬೆಂಗಳೂರು. ಅಧ್ಯಕ್ಷರು.
2. ಜಿಲ್ಲಾಧಿಕಾರಿಗಳು, ಬೆಂಗಳೂರುನಗರ ಜಿಲ್ಲೆ, ಬೆಂಗಳೂರು. ಸದಸ್ಯರು.
3. ಸರ್ಕಾರದ ಉಪ ಕಾರ್ಯದರ್ಶಿ 2, ನಗರಾಭಿವೃದ್ಧಿ ಇಲಾಖೆ, ವಿಕಾಸಸೌಧ, ಬೆಂಗಳೂರು. ಸದಸ್ಯ ಕಾರ್ಯದರ್ಶಿ.

ಮೇಲ್ಕಂಡ ಸಮಿತಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಚನೆ ಕುರಿತು ಸ್ವೀಕರಿಸಲ್ಪಡುವ ಎಲ್ಲಾ ಆಕ್ಷೇಪಣೆಗಳು, ಸಲಹೆ ಸೂಚನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಪರಿಗಣಿತ ಅಭಿಪ್ರಾಯವನ್ನೊಳಗೊಂಡ ವರದಿಯನ್ನು ಸಲ್ಲಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ವಾಲಿ**

ಪಿ.ಆರ್. 1713

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## SOCIAL WELFARE SECRETARIAT

**Sub:** Rules for award of freeships to the students studying in Karnataka-Inclusion of certain new provisions-Regarding.

**Read:** (1) G.O. No. SWL 273 BCA 78, Dated:27.03.1979.
(2) G.O. No. SWL 37 BPS 79, Dated:19.06.1979.
(3) G.O. No. SWL 57 BPS 80, Dated:03.03.1982.
(4) G.O. No. SWL 229 BCA 80, Dated:16.12.1982.

**Preamble:**

Government in its order Dated:16.12.1982 had evolved a scheme for the award of free ships to the students studying in Karnataka and prescribed certain criteria for the sanctioning authorities to sanction freeships. Since there was no prevision inthe said Government Order for payment of freeship directly to the students. Government felt it necessary to incorporate a proviso to the said Government Order for remursement of fee concession benefits directly to students in the cases where the students have already paid the fees to the Institutions. This is in order to simplify the mode of payment by keeping in view of the student's interest. Hence this order.

**Order No. SWD 185 BMS 2006, Bangalore, Dated:29th November, 2006**

In the circumstances explained in the preamble and in continuation of the Government Order No. SWD 229 BCA 80 Dated: 16.12.1982. Government hereby incorporates a proviso to sub-para (d) of Para-V of Annexure-I appened to the aforesaid Government Order as follows:

Provided in case of students who have already paid the fees to the Institutions, such reimbursement shall be made directly to the students by following the guidelines as enshrined inthe scheme of guidelines and at the rates proscribed by Government. This shall be done after the certrification by the Institution in which they are were studying and payment shall be made through cheques with proper acknowledgements.

This Order issues with the concurrence of the Finance Department vide it's U.O. Note No. FD 432 Exp-3, 05, Dated:14.11.2006 and Dated:15.11.2006.

By Order and in the name of the Governor of Karnataka,

**M.M. BHATTE**

P.R. 1723

Under Secretary to Government,
Social Welfare Department.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮ ನಿಯಮಿತದ ಆಡಳಿತ ಕಛೇರಿ ಸ್ಥಾಪನೆಗೆ ಬೆಂಗಳೂರು ನಗರದಲ್ಲಿ ಸ್ಥಳಾವಕಾಶವನ್ನು ಒದಗಿಸುವ ವಿಚಾರ.

**ಓದಲಾಗಿದೆ:** 1) ಸರ್ಕಾರಿ ಆದೇಶ ಪತ್ರ ಸಂಖ್ಯೆ: ಸಕಇ 65 ಎಸ್‌ಡಿಸಿ 04, ದಿನಾಂಕ:27.05.2006.
2) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಪವಕನಿ: ಗಿಉಯೋ:ಸಿಆರ್-27/ 04-05, ದಿನಾಂಕ:14.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ: (1)ರ ಆದೇಶದಲ್ಲಿ 2006-07ನೇ ಸಾಲಿನ ಆರ್ಥಿಕ ಸಾಲಿನಲ್ಲಿ ಪರಿಶಿಷ್ಟ ವರ್ಗದ ಜನರ ಸರ್ವತೋಮುಖ ಅಭಿವೃದ್ಧಿಗಾಗಿ ಹೆಚ್ಚಿನ ಒತ್ತು ನೀಡುವ ಸಂಬಂಧ ಪ್ರತ್ಯೇಕವಾಗಿ ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತವನ್ನು ಸ್ಥಾಪಿಸಲು ಆದೇಶಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ ಎಂಬ ಒಂದು ಪ್ರತ್ಯೇಕ ಸಂಸ್ಥೆಯನ್ನು ಸ್ಥಾಪಿಸಲು 1956ರ ಭಾರತೀಯ ಕಂಪನಿಗಳ ಅಧಿನಿಯಮದಡಿ ದಿನಾಂಕ:26.07.2006ರಲ್ಲಿ ನೊಂದಾಯಿಸಲಾಗಿದೆ.

ಕರ್ನಾಟಕ ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮ ನಿಯಮಿತದ ಕಛೇರಿಯನ್ನು ಸ್ಥಾಪಿಸಲು ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ನಗರ ಜಿಲ್ಲೆಯ ಸಂಪಂಗಿರಾಮನಗರದ 16ನೇ ಅಡ್ಡರಸ್ತೆಯಲ್ಲಿರುವ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯ ಕಟ್ಟಡದ ಮೊದಲನೆ ಮಹಡಿಯಲ್ಲಿ 2100 ಚದುರ ಅಡಿ ಸ್ಥಳಾವಕಾಶ ಇರುವುದನ್ನು ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ರವರು ಗುರುತಿಸಿ, ಸ್ಥಳ ಪರಿಶೀಲನೆ ನಡೆಸಿ, ನಿಗಮದ ಕಛೇರಿಯನ್ನು ನಡೆಸಲು ಸೂಕ್ತವಾಗಿದೆ ಎಂದು ಅಭಿಪ್ರಾಯ ಪಟ್ಟು, ಸದರಿ ಸ್ಥಳಾವಕಾಶವನ್ನು ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತಕ್ಕೆ ವಹಿಸಲು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಕೋರಿರುತ್ತಾರೆ. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 108 ಎಸ್‌ಡಿಸಿ 06, ಬೆಂಗಳೂರು, ದಿನಾಂಕ:27ನೇ ನವೆಂಬರ್, 2006**

ಈ ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ "ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ" ದ ಆಡಳಿತ ಕಛೇರಿಯನ್ನು ನೆಲೆಗೊಳಿಸಲು ಸಮಾಜ ಕಲ್ಯಾಣ ಇಲಾಖೆಯ ವಶದಲ್ಲಿರುವ ಬೆಂಗಳೂರು ನಗರ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, 16ನೇ ಅಡ್ಡರಸ್ತೆ, ಸಂಪಂಗಿರಾಮನಗರ, ಬೆಂಗಳೂರು ಈ ಕಟ್ಟಡದ ಮೊದಲನೆ ಮಹಡಿಯಲ್ಲಿ ಲಭ್ಯವಿರುವ 2100 ಚದುರ ಅಡಿ ವಿಸ್ತೀರ್ಣವುಳ್ಳ ಪ್ರದೇಶವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ವಶಕ್ಕೆ ಮುಂದಿನ ಆದೇಶದವರೆಗೆ ಹಸ್ತಾಂತರಗೊಳಿಸಲು ಆದೇಶಿಸಿದೆ.

ಸದರಿ ಕಟ್ಟಡದಲ್ಲಿ ನಿಗಮದ ಆಡಳಿತ ಕಛೇರಿ ಪ್ರಾರಂಭಿಸಲು ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರು ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಂ. ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1724

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಗುಲ್ಬರ್ಗಾ ಮಹಾನಗರ ಪಾಲಿಕೆಯಲ್ಲಿ ಉಪ ಕಂದಾಯಾಧಿಕಾರಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ನಅಇ 62 ಎಸಿಜಿ 2001, ದಿನಾಂಕ:16.10.2002.
2) ಸರ್ಕಾರದ ಆದೇಶ ಸಂಖ್ಯೆ: ನಅಇ 5 ಎಸಿಜಿ 2003, ದಿನಾಂಕ:20.09.2003.
3) ಸರ್ಕಾರದ ಆದೇಶ ಸಂಖ್ಯೆ: ನಅಇ 49 ಎಸಿಜಿ 2005, ದಿನಾಂಕ:29.10.2005.
4) ಆಯುಕ್ತರು, ಗುಲ್ಬರ್ಗಾ ಮಹಾನಗರ ಪಾಲಿಕೆ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಮನಪಾ/ ಜಿಎಡಿ/ ಸಿಬ್ಬಂದಿ/ 98/ 1981-82, ದಿನಾಂಕ:10/ 17.10.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗುಲ್ಬರ್ಗಾ ಮಹಾನಗರ ಪಾಲಿಕೆಗೆ ಒಂದು ಉಪ ಕಂದಾಯಾಧಿಕಾರಿ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಿದ್ದು, ಈ ಹುದ್ದೆಯನ್ನು ಕಾಲಕಾಲಕ್ಕೆ ಮೇಲೆ ಓದಲಾದ 2 ಮತ್ತು 3ರ ಸರ್ಕಾರದ ಆದೇಶಗಳಲ್ಲಿ ಮುಂದುವರೆಸಿದ್ದು, ಈ ಅವಧಿಯು ದಿನಾಂಕ:15.10.2006ಕ್ಕೆ ಮುಗಿದಿರುತ್ತದೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಗುಲ್ಬರ್ಗಾ ಮಹಾನಗರ ಪಾಲಿಕೆ, ಗುಲ್ಬರ್ಗಾ ಇವರು 1995ರ "ಡಿ" ಲಿಮಿಟೇಷನ್ ಪರಿಣಾಮದಿಂದಾಗಿ ಪಾಲಿಕೆಯ ಸುತ್ತಮುತ್ತಲಿನ ಪ್ರದೇಶಗಳಾದ ಕಪನೂರ, ಕುಸನೂರ, ರಾಜಾಪೂರ, ಕೋಟನೂರ ಮತ್ತು ಸಿರಸಗಿ ಗ್ರಾಮ ಮಂಡಲ ಪಂಚಾಯಿತಿಗಳು ಪಾಲಿಕೆಯ ವ್ಯಾಪ್ತಿಯಲ್ಲಿ ಬಂದಿರುವುದರಿಂದ ಹಾಗೂ ಹೊಸ ಬಡಾವಣೆಗಳು ತೀವ್ರಗತಿಯಲ್ಲಿ ಬೆಳೆಯುತ್ತಿದ್ದು, ಅವುಗಳ ಕರ ನಿರ್ಧಾರ, ಆಸ್ತಿ ವರ್ಗಾವಣೆ, ಸ್ವಯಂ ಆಸ್ತಿ ಘೋಷಣೆ, ಕರ ವಸೂಲಿ ಹಾಗೂ ಔದ್ಯೋಗಿಕ ಪ್ರದೇಶಗಳಿಗೆ ಕರ ನಿರ್ಧಾರ ಮಾಡುವ ಇತ್ಯಾದಿ ಕೆಲಸಗಳ ಒತ್ತಡ ಹೆಚ್ಚಾಗಿರುವುದರಿಂದ ಉಪ ಕಂದಾಯಾಧಿಕಾರಿ ಹುದ್ದೆಯು ಪಾಲಿಕೆಗೆ ಅತ್ಯಂತ ಅವಶ್ಯಕವಾಗಿದ್ದು, ಸದರಿ ಹುದ್ದೆಯನ್ನು ಖಾಯಂ ಆಗಿ ಸೃಜಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರು, ಗುಲ್ಬರ್ಗಾ ಮಹಾನಗರ ಪಾಲಿಕೆ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 49 ಎಸಿಜಿ 2005, ಬೆಂಗಳೂರು, ದಿನಾಂಕ:30.11.2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ನಅಇ 62 ಎಸಿಜಿ 2001, ದಿನಾಂಕ:16.10.2002ರ ಆದೇಶದಲ್ಲಿ ಗುಲ್ಬರ್ಗಾ ಮಹಾನಗರ ಪಾಲಿಕೆಗೆ ತಾತ್ಕಾಲಿಕವಾಗಿ ಸೃಜಿಸಲಾಗಿದ್ದ ಒಂದು ಉಪ ಕಂದಾಯಾಧಿಕಾರಿ ಹುದ್ದೆಯನ್ನು ದಿನಾಂಕ:16.10.2006 ರಿಂದ 15.10.2007ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ-1/ ಟಿಎಫ್‌ಪಿ 96, ದಿನಾಂಕ: 10.07.1996ರನ್ವಯ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ಸಂಪತ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1728

## INFRASTRUCTURE DEVELOPMENT SECRETARIAT

**Sub:** Shifting of the Railway Goods shed from Hubli Railway Station to Navalur, Dharwad District- grant of 100 acres of land free of cost to SWR-Orders reg.

**Read:** (1) G.O. No. IDD 16 NSW 2004, Dated:22.08.2006.
(2) Proceedings of the meeting of Monitoring Committee held under the Chairmanship of Principal Secretary, IDD on 24.11.2006.

**Preamble:**

In the G.O. Dated:22.08.2006 read at Sl.No.(1) above, GoK accorded sanction for the following 1) transfer of 100 acres of land belonging to KIADB to SWR for construction of modern & fully equipped freight terminus (2) To release Rs.5.00 crores being the cost of 100 acres of land to KIADB and (3) To Constitute a Committee to monitor the usage of land for the said project. In the First meeting of the Committee held under the Chairmanship of the Principal Secretary to Government, Infrastructure Development Department, on 24.11.2006 it was decided to reconstitute the Committee by including as its members Officers of Railway Department who are directly connected with the development of a modern and fully equipped freight terminus with containerization of warehousing etc. Hence, this Order.

**Government Order No. IDD 16 NSW 2003-Part-II, Bangalore, Dated:6th December, 2006**

After careful examination of the matter and in partial modification of para 3 of the earlier order Dated: 22.08.2006 sanction is hereby accorded for reconstitution of the Committee under the Chairmanship of Principal Secretary. Infrastructure Development Department with the following members to monitor the Development of a modern and fully equipped freight terminus with containerisation of warehousing etc.

| | |
|---|---|
| 1) The Principal Secretary to Government, IDD | Chairman |
| 2) The Divisional Railway Manager, SWR, Hubli. | Member |
| 3) The Principal Chief Engineer, SWR, Hubli. | Member |
| 4) The Chief Commercial Manager, SWR, Hubli. | Member |
| 5) The Chief Engineer (Planning), SWR, Hubli. | Member Secretary |
| 6) The Chief Executive Officer, K-RIDE, Bangalore | Member |
| 7) The Chief Executive Officer, KIADB, Bangalore | Member |
| 8) The Deputy Commissioner, Dharwad. | Member |
| 9) The Commissioner, Hubli-Dharwad Municipal Corporation | Member |

2. The other conditions specified in the G.O. Dated:22.08.2006 shall continue unaltered.

By Order and in the name of the Governor of Karnataka,

**N. MANJULA GEETHA**

P.R. 1734

Under Secretary to Government,
Infrastructure Development Department.

**Sub:** Release of consultancy Services fees to iDeCK for Rapid Traffic Study and Expressway Study-reg.

**Read:** (1) DO letter No.IDD 16 UIP 2005 Dated: 22.11.2005 of Principal Secretary to Government, INfrastructure Development Department addressed to the Managing Director, iDeck, Bangalore.

(2) Letter No.iDeCK/ 2005/06-813 Dated:29.11.2005, addressed to Principal Secretary to Government, Infrastructure Development Department.

(3) Government letter No.IDD 16 UIP 2005, Dated:08.12.2005 addressed to the M.D., iDeCK, Bangalore.

(4) The letter of M.D. and CEO, iDeck in No.iDeck/ 2005-06/ 1160 Dated:28.02.2006 addressed to the Principal Secretary to Government, IDD.

(5) G.O. No.IDD 63 NSW 2005 Dated:30.06.2006.

(6) iDeCK letter No. Nil Dated:18.,07.2006 requesting for release of balance amount of Rs.1,94,227.00.

**Preamble:**

Government of Karnataka have already released Rs.3,51,262/- to iDeCK towards study on the project of Expressway from Raj Bhavan to Hebbal and Rapid Traffic study in Bangalore.

2. The Managing Director, iDeCk in his letter Dated: 18.07.2006 read at Sl.No.(6) above, requested for release of balance amount of Rs.1,94,227/- towards the service fees for the study undertaken by them, GoK have examined the proposal of iDeCK and decided to release Rs.1,94,227/- as the last and final installment towards the service fees for undertaking Rapid Traffic study and Expressway study. Hence this order.

**Government Order No. IDD 95 NSW 2006, Bangalore, Dated:12th December, 2006**

After careful examination of the proposal of iDeCK, Government are pleased to release Rs.1,94,227/- (Rupees One Lakh Ninety Four Thousand Two Hundred and Twenty Seven) only towards

the service fees to iDeCK for undertaking Rapid Traffic study and Expressway study and the amount should be utilized for the project studies entrusted to iDeCK.

2. This amount would be met out of the available funds under the Head of Account "3451-00-090-1-06-059 Secretariat Economic Services- Infrastructure Preliminary Studies-Other Expenditure (Plan) 2006-07".

3. The Chief Financial Officer (CFO) of iDeCK would draw this amount on a payee's receipt duly conuntersigned by the Under Secretary to Government, Infrastructure Development Department.

4. This order issues in accordance with the powers delegated to the Principal Secretaries to Government by the Finance Department's G.O. No.FD 1 TFP 2003, Dated: 12.06.2003.

By Order and in the name of the Governor of Karnataka,

**N. MANJULA GEETHA**

P.R. 1747

Under Secretary to Government,
Infrastructure Development Department.

## ವಸತಿ ಸಚಿವಾಲಯ

**ವಿಷಯ:** ಭಾರತ ಸರ್ಕಾರದಿಂದ ವಾಂಬೆ ಯೋಜನೆಯಡಿ ಮಂಜೂರಾಗಿರುವ 23,000 ಮನೆಗಳು ಹಾಗೂ 3000 ಸಮುದಾಯ ಶೌಚಾಲಯಗಳ ನಿರ್ಮಾಣಕ್ಕೆ ರಾಜ್ಯದ ಪಾಲು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಕಕೊನಿಮರವರ ಪತ್ರ ಸಂಖ್ಯೆ: ಕಕೊನಿಮ/ ಆಯುಕ್ತರು/ ವಾಂಬೆ-6/ 2005-06/ 14, ದಿನಾಂಕ:06.04.2005.

2) ಸರ್ಕಾರದ ಪತ್ರ ಸಂಖ್ಯೆ: ವಇ/ 24/ ಕೊಮಂಲೆ/ 2005-06, ದಿನಾಂಕ:16.06.2005.

3) ಪ್ರಾದೇಶಿಕ ಮುಖ್ಯಸ್ಥರು (ಯೋಜನೆಗಳು), ಹುಡ್ಕೋ, ಭಾರತ ಸರ್ಕಾರದವರಿಗೆ ವಿಳಾಸಿಸಿರುವ ಪತ್ರ ಸಂಖ್ಯೆ: ಎನ್-11026/1/ 2005 ಯುಪಿಎ-III, ದಿನಾಂಕ:06.02.2006.

4) ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆರವರಿಗೆ ವಿಳಾಸಿಸಿರುವ ಅ.ಸ.ಪತ್ರ ಸಂಖ್ಯೆ: ಕಕೊನಿಮ/ ಆಯುಕ್ತರು/ ವಾಂಬೆ/ ಹಂತ-6/ 05-06/ 1412, ದಿನಾಂಕ:13.02.2006.

5) ಸರ್ಕಾರಿ ಆದೇಶ ಸಂಖ್ಯೆ: ವಇ 40 ಕೊಮಂಲೆ 2005, ದಿನಾಂಕ:31.03.2006.

6) ಆರ್ಥಿಕ ಇಲಾಖೆರವರ ಅ.ಟಿ. ಸಂಖ್ಯೆ: ಎಫ್‌ಡಿ/ 107/ ವೆಚ್ಚ-9/ 56, ದಿನಾಂಕ:10.11.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿರವರು ಹುಡ್ಕೋ ಹಾಗೂ ಕೇಂದ್ರ ಸರ್ಕಾರಕ್ಕೆ ವಾಂಬೆ ಯೋಜನೆಯಡಿಯಲ್ಲಿ 23,000 ಮನೆಗಳನ್ನು ಹಾಗೂ ನಿರ್ಮಲ್ ಭಾರತ್ ಅಭಿಯಾನದಡಿ 3,000 ಸಮುದಾಯ ಶೌಚಾಲಯಗಳನ್ನು ನಿರ್ಮಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಅನುಮೋದನೆಗಾಗಿ ಸಲ್ಲಿಸಿದ್ದರು.

ಮೇಲೆ ಓದಲಾದ (2)ರ ಪತ್ರದಲ್ಲಿ ಈ ಪ್ರಸ್ತಾವನೆಗಳನ್ನು ಕೇಂದ್ರದ ಅನುಮೋದನೆಗಾಗಿ ಸಲ್ಲಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಭಾರತ ಸರ್ಕಾರವು ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿರವರಿಗೆ ಕೇಂದ್ರ ಮಂಜೂರಾತಿ ಸಮಿತಿ (Central Sanctioning Committee of VAMBAY) 23,000 ಮನೆಗಳನ್ನು ಹಾಗೂ 3,000 ಎನ್.ಬಿ.ಎ. ಸಮುದಾಯ ಶೌಚಾಲಯಗಳ ನಿರ್ಮಾಣಧ ಪ್ರಸ್ತಾವನೆಗೆ ರಾಜ್ಯವು ತನ್ನ ಮೊದಲ ಕಂತನ್ನು ಪಾಲನ್ನು ಬಿಡುಗಡೆ ಮಾಡಿದ ನಂತರ ಕೇಂದ್ರ ತನ್ನ ಪಾಲನ್ನು ಬಿಡುಗಡೆ ಮಾಡುತ್ತದೆಂದು ಮತ್ತು ವಾಂಬೆ ಯೋಜನೆಯ ಎಲ್ಲಾ ಷರತ್ತುಗಳನ್ನು ಪೂರೈಸುವುದರ ಜೊತೆಗೆ ದಿನಾಂಕ 01.04.2004ಕ್ಕೆ ಮುಂಚೆಯೇ ಬಿಡುಗಡೆಯಾಗಿರುವ ಹಣಕ್ಕೆ ಬಳಕೆ ಪ್ರಮಾಣವನ್ನು ಒದಗಿಸತಕ್ಕದ್ದು ಎಂದು ತಾತ್ವಿಕವಾಗಿ ಒಪ್ಪಿಗೆ ತಿಳಿಸಿರುತ್ತದೆ.

ಮೇಲೆ ಓದಲಾದ (4)ರ ಅ.ಸ. ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿರವರು ರೂ.111.898 ಕೋಟಿ ಅಂದಾಜು ಮೊತ್ತದಲ್ಲಿ ನಿರ್ಮಿಸುವ 23,000 ಮನೆಗಳು ಮತ್ತು 3,000 ಸಮುದಾಯ ಶೌಚಾಲಯಗಳ ನಿರ್ಮಾಣಕ್ಕೆ ರಾಜ್ಯದ ಪಾಲನ್ನು ಬಿಡುಗಡೆ ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (5)ರಲ್ಲಿ ವಾಂಬೆ ಯೋಜನೆಯ 23,000 ಮನೆಗಳು ಹಾಗೂ 3,000 ಸಮುದಾಯ ಶೌಚಾಲಯಗಳ ನಿರ್ಮಾಣಕ್ಕೆ ಷರತ್ತಿನೊಂದಿಗೆ ಭಾರತ ಸರ್ಕಾರದ ಪಾಲು ಬಿಡುಗಡೆಯಾದ ನಂತರ ಖಜಾನೆಯಿಂದ ಈ ಮೊತ್ತವನ್ನು ತೆಗೆಯಬಹುದು ಎಂದ ಷರತ್ತಿನೊಂದಿಗೆ ರಾಜ್ಯದ ಪೂರ್ಣ ಪಾಲಾದ ರೂ.51.00 ಕೋಟಿಗಳನ್ನು ಲೆಕ್ಕ ಶೀರ್ಷಿಕೆ "6217-03-800-0-02-394 Loans" ರಡಿಯಲ್ಲಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಉಲ್ಲೇಖ (6)ರಲ್ಲಿ ರಾಜ್ಯ ಸರ್ಕಾರದ ವಂತಿಗೆ ಹಣವನ್ನು ಬಿಡುಗಡೆಯಾದ ನಂತರ ಈ ಯೋಜನೆಗಳ ಶೇ.50 ರಷ್ಟು ಸಬ್ಸಿಡಿ ಹಣ ಕೇಂದ್ರ ಸರ್ಕಾರ ಬಿಡುಗಡೆ ಮಾಡುವುದರಿಂದ, ಆರ್ಥಿಕ ಇಲಾಖೆ, ಆಡಳಿತ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಲವು ಷರತ್ತಿನೊಂದಿಗೆ ರೂ.51.00 ಕೋಟಿ ಹಣವನ್ನು ಬಿಡುಗಡೆಗೊಳಿಸಲು ಒಪ್ಪಿರುತ್ತದೆ.

ಸರ್ಕಾರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 40 ಕೊಮಂಲೆ 2005, ಬೆಂಗಳೂರು, ದಿನಾಂಕ:25ನೇ ನವೆಂಬರ್, 2006**

ವಾಂಬೆ ಯೋಜನೆಯಡಿ 23,000 ಮನೆಗಳು ಹಾಗೂ ನಿರ್ಮಲ್ ಭಾರತ್ ಅಭಿಯಾನದಡಿ 3,000 ಸಾಮೂಹಿಕ ಸಮುದಾಯ ಶೌಚಾಲಯಗಳನ್ನು ನಿರ್ಮಿಸಲು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯಲ್ಲಿ ಈಗಾಗಲೇ ಲಭ್ಯವಿರುವ ರೂ.4.00 ಕೋಟಿಗಳ ಬಡ್ಡಿ ಹಣದ ಜೊತೆಗೆ ಹೆಚ್ಚುವರಿಯಾಗಿ ರೂ.51.00 ಕೋಟಿಗಳನ್ನು ಲೆಕ್ಕ ಶೀರ್ಷಿಕೆ 6215-02-190-1-01-395 ರಡಿಯಲ್ಲಿ ಈ ಕೆಳಗಿನ ಷರತ್ತಿನೊಂದಿಗೆ ಒದಗಿಸಲಾಗಿದೆ.

(1) ಈ ಹಿಂದಿನ ಸಾಲಿನಲ್ಲಿ ಪಡೆದಿರುವ ಹಣಕ್ಕೆ ಬಡ್ಡಿಯಿಂದ ಉಳಿದಿರುವ ಹಣ ರೂ.4.00 ಕೋಟಿ ಈಗಾಗಲೇ ಮಂಡಳಿಯಲ್ಲಿ ಲಭ್ಯವಿರುವ ಈ ಯೋಜನೆಗೆ ಉಪಯೋಗಿಸಿಕೊಳ್ಳುವುದು.

(2) ಈ ಹೆಚ್ಚುವರಿ ಮೊತ್ತವನ್ನು ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರು ಹಣ ಪಡೆಯುವವರ ರಸೀದಿ ಮೂಲಕ (On a Payee's Receipt) ಪಡೆದು ಅನುಸೂಚಿತ ವಾಣಿಜ್ಯ ಬ್ಯಾಂಕಿನಲ್ಲಿ ಪ್ರತ್ಯೇಕವಾಗಿ ಖಾತೆ ತೆರೆದು ಜಮಾ ಮಾಡಲು ಆರ್ಥಿಕ ಇಲಾಖೆ ಅನುಮೋದಿಸಿರುತ್ತದೆ.

(3) ಆರ್ಥಿಕ ಇಲಾಖೆಯ ಮೇಲಿನ (2)ರ ಷರತ್ತಿನ ಅನುಮೋದನೆಯು ಭಾರತ ಸರ್ಕಾರದಿಂದ ಹಣ ಬಿಡುಗಡೆಯಾಗುವ ತನಕ ಜಮಾ ಆಗಿರುವ ಹಣವನ್ನು ತೆಗೆಯಬಾರದು.

(4) ಒಂದು ಪಕ್ಷ ಭಾರತ ಸರ್ಕಾರದಿಂದ 3 ತಿಂಗಳೊಳಗೆ ಹಣ ಬಿಡುಗಡೆಯಾಗದಿದ್ದಲ್ಲಿ ಜಮೆಯಾಗಿರುವ ಹಣ ಹಾಗೂ ಬಡ್ಡಿಯನ್ನು ರಾಜ್ಯದ ಸಂಚಿತ ನಿಧಿಗೆ (Consolidated Fund) ಈಗ ಬಿಡುಗಡೆಗೊಳಿಸಲಾಗಿರುವ ಲೆಕ್ಕ ಶೀರ್ಷಿಕೆಯಡಿಯಲ್ಲಿ ತುಂಬುವುದು.

(5) ಭಾರತ ಸರ್ಕಾರದಿಂದ ಹಣ ಬಿಡುಗಡೆಯಾಗುವ ತನಕ ಯಾವುದೇ ಸನ್ನಿವೇಶದಲ್ಲೂ ಮಂಜೂರಾಗಿರುವ ಯೋಜನೆಯಡಿ ಕೆಲಸ ಕಾರ್ಯಗಳನ್ನು ಕೈಗೊಳ್ಳಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಎಫ್‌ಡಿ 107 ವೆಚ್ಚ-9/ 06 ದಿನಾಂಕ:10.11.2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1752

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯು ಏರ್ಪಡಿಸುವ ಪುರಾತತ್ವ ಛಾಯಾ ಚಿತ್ರ ವಸ್ತು ಪ್ರದರ್ಶನಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ಕೀಮರ 2006 ದಿನಾಂಕ:07.04.2006.

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ರವರ ಪತ್ರ ಸಂಖ್ಯೆ: ಡಿಎಎಂ/ ಎಸಿಟಿ/1/43/ 2006-07, ದಿನಾಂಕ:24.08.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:07.04.2006ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ 2006-07ನೇ ಸಾಲಿನ ಯೋಜನಾ ಕಾರ್ಯಕ್ರಮಗಳಡಿಯಲ್ಲಿ ವಸ್ತು ಪ್ರದರ್ಶನಗಳಿಗಾಗಿ ರೂ.2.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:24.08.2006ರ ಪತ್ರದಲ್ಲಿ ಮೈಸೂರಿನಲ್ಲಿ ದಸರಾ ಮಹೋತ್ಸವ ಸಂದರ್ಭದಲ್ಲೂ, ಹಂಪಿಯಲ್ಲಿ ಹಂಪಿ ಉತ್ಸವದ ಸಂದರ್ಭದಲ್ಲೂ ಹಾಗೂ ಬೆಳಗಾವಿಯಲ್ಲಿ ವಿಶ್ವ ಕನ್ನಡ ಸಮ್ಮೇಳನದಲ್ಲೂ ಇಲಾಖಾ ವತಿಯಿಂದ ಪುರಾತತ್ವ ಛಾಯಾಚಿತ್ರ ವಸ್ತು ಪ್ರದರ್ಶನಗಳನ್ನು ಏರ್ಪಡಿಸುವ ಸಲುವಾಗಿ ರೂ.2.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 196 ಕೆಎಂಯು 2006, ಬೆಂಗಳೂರು, ದಿನಾಂಕ:1ನೇ ಡಿಸೆಂಬರ್, 2006**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯು 2006-07ನೇ ಸಾಲಿನ ದಸರಾ ಮಹೋತ್ಸವದ ಸಂದರ್ಭದಲ್ಲಿ ಮೈಸೂರಿನಲ್ಲಿ, ಹಂಪಿ ಉತ್ಸವದ ಸಂದರ್ಭದಲ್ಲಿ ಹಂಪಿಯಲ್ಲೂ, ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಬೆಳಗಾವಿಯಲ್ಲೂ ಪುರಾತತ್ವ ಛಾಯಾಚಿತ್ರ ವಸ್ತು ಪ್ರದರ್ಶನವನ್ನು ರೂ.2.00 ಲಕ್ಷಗಳ (ರೂ.ಎರಡು ಲಕ್ಷಗಳು ಮಾತ್ರ) ವೆಚ್ಚದಲ್ಲಿ ಸರ್ಕಾರವು ಈ ಮೂಲಕ ಅನುಮತಿ ನೀಡುತ್ತದೆ.

ಈ ಸಂಬಂಧ ಉಂಟಾಗುವ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-103-0-01 (ಯೋಜನೆ) ಉಪಶೀರ್ಷಿಕೆ-059ರಲ್ಲಿ ಭರಿಸತಕ್ಕದ್ದು. ಈ ಲೆಕ್ಕಶೀರ್ಷಿಕೆಯಲ್ಲಿ ಒದಗಿಸಿರುವ ಅನುದಾನವು ಯಾವುದೇ ಕಾರಣಕ್ಕೂ ಮೀರಕೂಡದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರೀಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 1019 ಐಎಫ್ (ಬಿಎ) 2006 ದಿನಾಂಕ:08.11.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1753

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ರಂಗಾಪುರದಲ್ಲಿ ನಿರ್ಮಿಸುತ್ತಿರುವ ಸ್ವಾತಂತ್ರ್ಯ ಹೋರಾಟಗಾರರ ಗಾಂಧಿಭವನ ನಿರ್ಮಾಣಕ್ಕೆ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 10 ಸಾಪ್ರನಿ 2000, ದಿನಾಂಕ:17.02.2000.

2) ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ: 144: ಸ್ಮಾರಕ: 99-2000 ದಿನಾಂಕ:29.09.2006.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ರಂಗಾಪುರ ನಿರ್ಮಿಸುತ್ತಿರುವ ಸ್ವಾತಂತ್ರ್ಯ ಹೋರಾಟಗಾರರ ಗಾಂಧಿಭವನ ನಿರ್ಮಾಣಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:17.02.2000ರ ಸರ್ಕಾರಿ ಆದೇಶದಲ್ಲಿ ರೂ.9.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿತ್ತು. ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ರವರು ಮೇಲೆ (3)ರಲ್ಲಿ ಓದಲಾದ ದಿನಾಂಕ:29.09.2006ರ ಪತ್ರದಲ್ಲಿ ಸದರಿ ರೂ.9.00 ಲಕ್ಷಗಳ ಅನುದಾನವನ್ನು ಬಳಸಿರುವ ಬಗ್ಗೆ ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ರವರು ಬಳಕೆ ಪ್ರಮಾಣ ಪತ್ರ ಸಲ್ಲಿಸಿದ್ದು, ಉಳಿದ ರೂ.6.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 6 ಸಾಪ್ರನಿ 2006, ಬೆಂಗಳೂರು, ದಿನಾಂಕ:8ನೇ ಡಿಸೆಂಬರ್, 2006**

ಸರ್ಕಾರವು ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ರಂಗಾಪುರದಲ್ಲಿ ನಿರ್ಮಿಸುತ್ತಿರುವ ಸ್ವಾತಂತ್ರ್ಯ ಹೋರಾಟಗಾರರ ಗಾಂಧಿಭವನ ನಿರ್ಮಾಣಕ್ಕೆ 2ನೇ ಕಂತಿನ ಅನುದಾನವಾಗಿ ರೂ.6.00 ಲಕ್ಷಗಳನ್ನು ಈ ಮೂಲಕ ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಅವರಿಗೆ ಬಿಡುಗಡೆ ಮಾಡುತ್ತದೆ. ಈ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕಶೀರ್ಷಿಕೆ 4202-04-800-1-02-139 (ಯೋಜನೇತರ) ಇದರಲ್ಲಿ ಭರಿಸತಕ್ಕದ್ದು. ಹಾಗೂ ಈ ರೀತಿ ಭರಿಸುವಾಗ ಲೆಕ್ಕಶೀರ್ಷಿಕೆ ಅಡಿಯಲ್ಲಿ ಒದಗಿಸಿರುವ ಒಟ್ಟಾರೆ ಅನುದಾನದಲ್ಲಿ ಯಾವುದೇ ಕಾರಣಕ್ಕೂ ಮೀರಕೂಡದು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರೀಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: ಇಡಿ 1066 ಐಎಫ್(ಬಿಎ) 2006 ದಿನಾಂಕ:14.11.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1754

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಆರ್ಥಿಕ ಸಚಿವಾಲಯ

**ವಿಷಯ:** ಅಖಿಲ ಭಾರತ 73ನೇ ಕನ್ನಡ ಸಾಹಿತ್ಯ ಸಮ್ಮೇಳನದ ವೆಚ್ಚಕ್ಕಾಗಿ ಮತ್ತು ಕನ್ನಡ ಭವನ ನಿರ್ಮಿಸಲು ಶಿವಮೊಗ್ಗ ಜಿಲ್ಲೆಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ವಂತಿಗೆಯಾಗಿ ನೀಡುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಶಿವಮೊಗ್ಗ ಜಿಲ್ಲಾ ಶಾಖೆ, ಇವರ ಪತ್ರ ಸಂಖ್ಯೆ:ಕರಸನೌಸಂ ದಿನಾಂಕ 16–8–2006.

2. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ:3105/2006–07 ದಿನಾಂಕ 21–8–2006.

3. ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರು ಸರ್ಕಾರಕ್ಕೆ ಬರೆದಿರುವ ಪತ್ರ ದಿನಾಂಕ: 16–10–2006.

**ಪ್ರಸ್ತಾವನೆ:**

ಮೇಲೆ (2) ರಲ್ಲಿ ಓದಲಾದ ದಿನಾಂಕ 21–8–2006ರ ಪತ್ರದಲ್ಲಿ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರು ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಶಿವಮೊಗ್ಗ ಶಾಖೆ, ಶಿವಮೊಗ್ಗ ಇವರ ದಿನಾಂಕ 16–8–2006ರ ಪತ್ರವನ್ನು ಸರ್ಕಾರಕ್ಕೆ ಕಳುಹಿಸುತ್ತಾ, ಅಖಿಲ ಭಾರತ 73ನೇ ಕನ್ನಡ ಸಾಹಿತ್ಯ ಸಮ್ಮೇಳನವು ಶಿವಮೊಗ್ಗದಲ್ಲಿ ಡಿಸೆಂಬರ್ ತಿಂಗಳಲ್ಲಿ ಜರುಗಲಿದ್ದು, ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರಿ ನೌಕರರ ವೇತನದಿಂದ ಒಂದು ದಿನದ ವೇತನವನ್ನು ಕಟಾಯಿಸಲು ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲೆ (1) ರಲ್ಲಿ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಶಿವಮೊಗ್ಗ ಇವರು ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರಿಗೆ ವಿಳಾಸಿಸಿರುವ ಪತ್ರ ದಿನಾಂಕ 16–8–2006 ರಲ್ಲಿ, ಅಖಿಲ ಭಾರತ 73ನೇ ಕನ್ನಡ ಸಾಹಿತ್ಯ ಸಮ್ಮೇಳನವು ಶಿವಮೊಗ್ಗದಲ್ಲಿ ಜರುಗಲು ದಿನಾಂಕ 25–4–2006 ರಂದು ನಡೆದ ಜಿಲ್ಲಾ ಸಂಘದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಶಿವಮೊಗ್ಗ ಜಿಲ್ಲೆಯ ಸಮಸ್ತ ನೌಕರರ ಒಂದು ದಿನದ ಸಂಬಳವನ್ನು ದೇಣಿಗೆಯಾಗಿ ನೀಡಲು ಸಭೆ ಸರ್ವಾನುಮತದ ಒಪ್ಪಿಗೆ ಸೂಚಿಸಿದ್ದು, ಸದರಿ ಸಮ್ಮೇಳನದ ಖರ್ಚು ವೆಚ್ಚಕ್ಕಾಗಿ ಹಾಗೂ ಕನ್ನಡ ಭವನ ನಿರ್ಮಾಣಕ್ಕಾಗಿ ಶಿವಮೊಗ್ಗ ಜಿಲ್ಲೆಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ಕಟಾಯಿಸಿ, ಶೇಕಡಾ 50ರಷ್ಟು ಸಾಹಿತ್ಯ ಸಮ್ಮೇಳನಕ್ಕೆ ಹಾಗೂ ಶೇಕಡಾ 50ರಷ್ಟು ಕನ್ನಡ ಭವನ ನಿರ್ಮಾಣಕ್ಕೆ ಉಪಯೋಗಿಸಿಕೊಳ್ಳಲು ಸೂಕ್ತ ಆದೇಶ ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಬೇಕಾಗಿ ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ 16–10–2006ರ ಪತ್ರದಲ್ಲಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರು ಅಖಿಲ ಭಾರತ 73ನೇ ಕನ್ನಡ ಸಾಹಿತ್ಯ ಸಮ್ಮೇಳನವು ಶಿವಮೊಗ್ಗದಲ್ಲಿ ಡಿಸೆಂಬರ್ ತಿಂಗಳ 20 ರಿಂದ 23ರವರೆಗೆ 4 ದಿನಗಳ ಕಾಲ ನಡೆಯಲಿದ್ದು, ಈ ಬಗ್ಗೆ ಶಿವಮೊಗ್ಗ ಜಿಲ್ಲಾ ಸರ್ಕಾರಿ ನೌಕರರ ಅಧ್ಯಕ್ಷರು ಸಭೆ ಸೇರಿ ನಿರ್ಣಯ ಕೈಗೊಂಡಿರುವುದಾಗಿ, ಈ ಹಿಂದೆ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಸರ್ಕಾರಿ ನೌಕರರು ತಮ್ಮ ಒಂದು ದಿನದ ವೇತನವನ್ನು ಕೊಟ್ಟಿದ್ದು ಈ ಕುರಿತು ಸರ್ಕಾರ ಆದೇಶ ಹೊರಡಿಸಿರುವುದರಿಂದ, ಸದರಿ ಸಮ್ಮೇಳನಕ್ಕೆ ಶಿವಮೊಗ್ಗ ಜಿಲ್ಲೆಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು ಕೊಡುಗೆಯಾಗಿ ನೀಡಲು ಈಗಾಗಲೇ ಒಪ್ಪಿದ್ದು, ನವೆಂಬರ್ ತಿಂಗಳ ಸಂಬಳದಲ್ಲಿ ಈ ಕೊಡುಗೆಯನ್ನು ಕಡಿತಗೊಳಿಸಲು ಸೂಕ್ತ ಆದೇಶ ಹೊರಡಿಸುವಂತೆ ಮಾನ್ಯ ಉಪ ಮುಖ್ಯ ಮಂತ್ರಿಯವರನ್ನು ಕೋರಿರುತ್ತಾರೆ.

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಶಿವಮೊಗ್ಗ ಹಾಗೂ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 30 ಎಸ್‌ಆರ್‌ಪಿ 2006, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ಜಿಲ್ಲಾ ಸರ್ಕಾರಿ ನೌಕರರ ಸಂಘದ ಕಾರ್ಯಕಾರಿ ಸಮಿತಿಯ ನಿರ್ಣಯದಂತೆ ಮತ್ತು ಅಖಿಲ ಭಾರತ 73ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಮಿತಿಯ ಕೋರಿಕೆಯಂತೆ ಶಿವಮೊಗ್ಗ ಜಿಲ್ಲೆಯ ರಾಜ್ಯ ಸರ್ಕಾರಿ ನೌಕರರ ಒಂದು ದಿನದ ವೇತನವನ್ನು 2006ರ ನವೆಂಬರ್ ತಿಂಗಳ ವೇತನದಲ್ಲಿ ಕಟಾಯಿಸಲು ಮಂಜೂರಾತಿ ನೀಡಿದೆ. ಈ ರೀತಿ ಕಟಾವು ಮಾಡಿ ಸಂಗ್ರಹಿಸಿದ ಒಟ್ಟು ಮೊತ್ತದಲ್ಲಿ ಈ ಕೆಳಕಂಡಂತೆ ಹಣವನ್ನು ವಿಭಾಗಿಸಿ ವಿನಿಯೋಗಿಸಲು ಮಂಜೂರಾತಿ ನೀಡಲಾಗಿದೆ:–

ಅ. ಒಟ್ಟು ಮೊತ್ತದಲ್ಲಿ ಶೇ.50 ರಷ್ಟನ್ನು 73ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ಮತ್ತು

ಆ. ಶೇ.50 ರಷ್ಟನ್ನು ಶಿವಮೊಗ್ಗ ಜಿಲ್ಲಾ ಕನ್ನಡ ಭವನ ನಿರ್ಮಾಣಕ್ಕಾಗಿ ವಿನಿಯೋಗಿಸಲು ಜಿಲ್ಲಾಧಿಕಾರಿಗಳ ವಶಕ್ಕೆ ನೀಡುವುದು.

2. ವೇತನ ಬಿಲ್ಲಿನಲ್ಲಿ ಕಟಾಯಿಸಿದ ಮೊತ್ತವನ್ನು ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರಿಗೆ ಚೆಕ್ ಮೂಲ ಖಜಾನೆ ಅಧಿಕಾರಿಗಳು ಸಂದಾಯ ಮಾಡುವುದು ಹಾಗೂ ಈ ಕುರಿತು ಈ ಕೆಳಗೆ ಸೂಚಿಸಿರುವ ವಿಧಿ ವಿಧಾನಗಳಂತೆ ಕ್ರಮ ತೆಗೆದುಕೊಳ್ಳುವುದು:–

ಅ) ನೌಕರರ ಒಂದು ದಿನದ ವೇತನ ವಂತಿಗೆಯನ್ನು 2006ರ ನವೆಂಬರ್ ತಿಂಗಳ ವೇತನದ ಬಿಲ್ಲಿನಿಂದ ಕಟಾವುಗೊಳಿಸುವ ಮೂಲಕ ವಸೂಲು ಮಾಡಲು ಆಯಾ ಕಛೇರಿ ಮುಖ್ಯಾಧಿಕಾರಿಗಳು ಮತ್ತು ಖಜಾನಾಧಿಕಾರಿಗಳು ಅಧಿಕಾರ ಪಡೆದಿರುತ್ತಾರೆ.

ಆ) ಒಂದು ದಿನದ ವೇತನವನ್ನು ವಂತಿಗೆಯಾಗಿ ಕೊಡಲಿಚ್ಛಿಸದ ನೌಕರರು ತಮ್ಮ ಅಸಮ್ಮತಿಯನ್ನು ಸಂಬಂಧಪಟ್ಟ ಬಟವಾಡೆ ಅಧಿಕಾರಿಗಳಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು ಮತ್ತು ಅಂತಹ ಲಿಖಿತ ಪತ್ರ ನೌಕರರಿಂದ ನವೆಂಬರ್ ತಿಂಗಳಿನ ಸಂಬಳದ ಬಿಲ್ಲನ್ನು ಖಜಾನೆಗೆ ಸಲ್ಲಿಸುವ ದಿನಾಂಕದ ಒಳಗಾಗಿ ಬಂದಿದ್ದಲ್ಲಿ ಮಾತ್ರ ಅಂತಹ ನೌಕರನ/ಳ ಒಂದು ದಿನದ ವೇತನವನ್ನು 2006ರ ನವೆಂಬರ್ ತಿಂಗಳಿನ ವೇತನ ಬಿಲ್ಲಿನಲ್ಲಿ ಕಟಾವು ಮಾಡತಕ್ಕದ್ದಲ್ಲ.

ಇ) ಪ್ರತಿಯೊಬ್ಬ ನೌಕರನ/ಳ ಕಟಾಯಿಸಿದ ಒಂದು ದಿನದ ವೇತನದ ಮೊತ್ತವನ್ನು ಬಿಲ್ಲಿನಲ್ಲಿ ಅವರ ಹೆಸರಿನ ಎದುರಿನಲ್ಲಿ **"73ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ವಂತಿಕೆ"** ಎಂದು ಪ್ರತ್ಯೇಕ ಅಂಕಣದಲ್ಲಿ ಕಾಣಿಸಬೇಕು ಮತ್ತು ಸಮಗ್ರ ವೇತನ ಬಿಲ್ಲಿನಲ್ಲಿ ಕಡಿತಗೊಳಿಸಿದ ಒಟ್ಟು ಮೊತ್ತವನ್ನು ವೇತನ ಬಿಲ್ಲಿನ ಮುಖ ಪುಟದಲ್ಲಿ **"73ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ವಂತಿಕೆ"** ಎಂಬುದಾಗಿ ಸ್ಪಷ್ಟವಾಗಿ ನಮೂದಿಸಬೇಕು. ಜಿಲ್ಲಾ ಖಜಾನೆ ಅಧಿಕಾರಿಗಳು ಒಟ್ಟು ಮೊತ್ತವನ್ನು ಈ ಕೆಳಗೆ ನಮೂದಿಸಿರುವ ಲೆಕ್ಕ ಶೀರ್ಷಿಕೆಗೆ ವರ್ಗಾವಣೆ ಜಮಾ ಮೂಲಕ ಬಿಲ್ಲನ್ನು ಪಾವತಿ ಮಾಡಬೇಕು. ವೇತನ ಬಟವಾಡೆ ಮಾಡಲು ನಿವ್ವಳ ಮೊತ್ತಕ್ಕೆ ಚೆಕ್ಕನ್ನು ಬಟವಾಡೆ ಅಧಿಕಾರಿಗೆ ಅವರು ನೀಡಬೇಕು.

ಈ) 73ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕಾಗಿ ಶಿವಮೊಗ್ಗ ಜಿಲ್ಲೆಯ ರಾಜ್ಯ ಸರ್ಕಾರಿ ಅಧಿಕಾರಿ/ನೌಕರರ ಒಂದು ದಿನದ ವೇತನವನ್ನು ಕಟಾಯಿಸಿ ಸದರಿ ಮೊತ್ತವನ್ನು, ಲೆಕ್ಕಶೀರ್ಷಿಕೆ **"8658-00-102-4-17-73ನೇ ಕನ್ನಡ ಸಾಹಿತ್ಯ ಸಮ್ಮೇಳನ, ಶಿವಮೊಗ್ಗ"** ರಡಿ ಜಮಾ ಮಾಡತಕ್ಕದ್ದು. ಹೀಗೆ ಜಮಾ ಮಾಡುವ ಒಟ್ಟು ಮೊತ್ತಕ್ಕೆ ಜಿಲ್ಲಾ ಖಜಾನೆ ಅಧಿಕಾರಿಯು ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರಿಗೆ ಕ್ರೋಢೀಕೃತ ಮೊಬಲಗಿಗೆ ಚೆಕ್ಕನ್ನು ನೀಡುವುದು.

ಉ) 2006ರ ನವೆಂಬರ್ ತಿಂಗಳಿನಲ್ಲಿ ಸ್ವೀಕರಿಸಲಾದ ವೇತನ ಬಿಲ್ಲುಗಳ ನಿರ್ವಹಣೆಯನ್ನು 2006ರ ಡಿಸೆಂಬರ್ 10ನೇ ದಿನಾಂಕದೊಳಗೆ ಪೂರೈಸಬೇಕು. ನವೆಂಬರ್ ತಿಂಗಳು ಅಂತ್ಯಗೊಂಡ ನಂತರ ಪಾವತಿ ಮಾಡಿದ ಬಿಲ್ಲುಗಳ ಪ್ರಕರಣಗಳಲ್ಲಿ ಅವುಗಳನ್ನು ಪಾವತಿ ಮಾಡಿದ ಒಂದು ವಾರದೊಳಗೆ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರಿಗೆ ಚೆಕ್ಕನ್ನು ಕಳೂಹಿಸಬೇಕು ಹಾಗೂ ಹೀಗೆ ಕೈಗೊಂಡ ಕ್ರಮದ ಬಗ್ಗೆ ಒಂದು ಪ್ರತಿಯನ್ನು ಆರ್ಥಿಕ ಇಲಾಖೆಗೆ ಕಳುಹಿಸಬೇಕು.

ಊ) ಮಹಾಲೇಖಪಾಲರು ನೀಡಿದ ಅಧಿಕಾರ ಪತ್ರದ ಮೇಲೆ ತಮ್ಮ ವೇತನವನ್ನು ಖಜಾನೆಯಿಂದ ಪಡೆಯುವ ಅಧಿಕಾರಿಗಳೂ ಸಹ ಮೇಲೆ ಕಾಣಿಸಿದ ಕ್ರಮವನ್ನು ಪಾಲಿಸುವುದು.

ಋ) ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಅವರು ಈ ವಂತಿಕೆ ಹಣವನ್ನು ಉದ್ದೇಶಿತ ಯೋಜನೆಗೆ ಬಳಸಿಕೊಳ್ಳಲು ಅಧಿಕಾರ ಹೊಂದಿರುತ್ತಾರೆ.

**ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಎನ್.ಟಿ. ನಾಯ್ಕ್**

**ಸರ್ಕಾರದ ಉಪ ಕಾರ್ಯದರ್ಶಿ,**

**ಆರ್ಥಿಕ ಇಲಾಖೆ (ಸೇವೆಗಳು-2).**

ಪಿ.ಆರ್. 1668

**ವಿಷಯ:** ಶ್ರೀ ಡಾ. ಜಿ.ಬಿ.ದೇಸಾಯಿ, ನಿವೃತ್ತ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 4 ಎಸ್‌ಇಎನ್ 05 ದಿನಾಂಕ:24.06.2005.

2) ಡಾ. ಜಿ.ಬಿ.ದೇಸಾಯಿ, ನಿವೃತ್ತ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ರವರ ದಿ:16.08.05ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಡಾ. ಜಿ.ಬಿ.ದೇಸಾಯಿ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಹಾಲಿ ನಿವೃತ್ತ) ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯಲ್ಲಿ ನಿರ್ದೇಶಕರಾಗಿ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ 2003-04 ಹಾಗೂ 2004-05ನೇ ಸಾಲಿಗಾಗಿ, ಆಸ್ಪತ್ರೆಗಳಿಗೆ ಬೇಕಾದ ವಿವಿಧ ಸರ್ಜಿಕಲ್ ಉಪಕರಣಗಳು, ಪರಿಕರಗಳು, ಡಿಸ್ಪೋಸಬಲ್ ಸಿರಿಂಜ್‌ಗಳು ಮುಂತಾದ ಸರಕು ಸಾಮಗ್ರಿಗಳನ್ನು ಮೆ. ಸಿಗ್ಮಾ ಮಾರ್ಕೇಟಿಂಗ್ ಸಿಸ್ಟಮ್ಸ್ ಎಂಬ ಖೊಟ್ಟೆ ಸಂಸ್ಥೆಯಿಂದ ರಾಜ್ಯ ಅಥವಾ ಕೇಂದ್ರ ಸರ್ಕಾರದ ಡಿ.ಜಿ.ಎಸ್.ಡಿ.ಯಿಂದ ಅಂಗೀಕೃತಗೊಂಡ ದರಗುತ್ತಿಗೆ ಸಂಸ್ಥೆಗಳ ದರ ಪಟ್ಟಿಗಳನ್ನು ಪಡೆದು ಇವುಗಳಲ್ಲಿ ಈ ಸಾಮಗ್ರಿಗಳಿಗೆ ದರಗಳು ಹಾಗೂ ಪ್ರಮಾಣವನ್ನು ಆಯ್ಕೆ ಮಾಡಿ ಪ್ರಸ್ತಾವನೆ ಸಲ್ಲಿಸಲಾಗಿದೆಯೇ ಎಂಬ ಅಂಶಗಳನ್ನು ಖಚಿತಪಡಿಸಿಕೊಳ್ಳದೆ ಸಿಗ್ಮಾ ಸಂಸ್ಥೆ ಪ್ರತಿನಿಧಿಯೊಂದಿಗೆ ಶಾಮೀಲಾಗಿ ಕರ್ನಾಟಕ ಆರ್ಥಿಕ ಸಂಹಿತೆ ಮತ್ತು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ 3ನ್ನು ಉಲ್ಲಂಘಿಸಿ ಆ ಸಂಸ್ಥೆಗೆ ಸರಬರಾಜು ಆದೇಶ ನೀಡಿ ಒಟ್ಟು ರೂ.1.25ಕೋಟಿ ಹಣ ಪಾವತಿಸಿರುವ ಮೂಲಕ ಸರ್ಕಾರಕ್ಕೆ ಸುಮಾರು ರೂ.60ಲಕ್ಷ ನಷ್ಟವುಂಟು ಮಾಡಿದ ಆರೋಪಕ್ಕೆ ಕಾರಣರಾಗಿ ತೀವ್ರ ದುರ್ನಡತೆಯ ಆರೋಪಗಳಿಗಾಗಿ ಡಾ: ಜಿ.ಬಿ.ದೇಸಾಯಿ, ನಿವೃತ್ತ ನಿರ್ದೇಶಕರು ಇವರಿಗೆ ಮೇಲೆ (1)ರಲ್ಲಿ ಓದಲಾದ ದಿ:24.06.05ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಮೇಲೆ(2)ರಲ್ಲಿ ಓದಲಾದ ದಿ:16.08.05ರ ಲಿಖಿತ ಉತ್ತರ ಸಲ್ಲಿಸಿದ ಆರೋಪಿತ ನಿವೃತ್ತ ಅಧಿಕಾರಿ ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 4 ಎಸ್‌ಇಎನ್ 2005 ಬೆಂಗಳೂರು, ದಿನಾಂಕ:28ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಪ್ರಾದೇಶಿಕ ಆಯುಕ್ತರು (Regional Commissioner), ಬೆಳಗಾಂ ವಿಭಾಗ, ಬೆಳಗಾಂ ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಿಲ್ಲಾ ಆರೋಗ್ಯಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಳಗಾಂ ಜಿಲ್ಲೆ, ಬೆಳಗಾಂ ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಹಾಗೂ ಶೀಘ್ರಲಿಪಿಗಾರರ ಸೇವೆ, ಲೇಖನ ಸಾಮಗ್ರಿ ಮತ್ತು ಸ್ಥಳಾವಕಾಶವನ್ನು ಪ್ರಾದೇಶಿಕ ಆಯುಕ್ತರು, ಬೆಳಗಾಂ ವಿಭಾಗ, ಬೆಳಗಾಂ ರವರು ಒದಗಿಸುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

ಪಿ.ಆರ್. 1696

**ವಿಷಯ:** ಶ್ರೀ ಅಬ್ದುಲ್ ಖಯ್ಯೂಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 156 ಎಸ್ಇಎನ್ 05 ದಿ:29.05.06.

2) ಶ್ರೀ ಅಬ್ದುಲ್ ಖಯ್ಯೂಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ದಿ:12.06.06ರ ಉತ್ತರ.

**ಪ್ರಸ್ತಾವನೆ:**

ಬೆಂಗಳೂರು ಪಶ್ಚಿಮ ವಲಯದ ಮನೆ ಬಾಡಿಗೆ ನಿಯಂತ್ರಣಾಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಅಬ್ದುಲ್ ಖಯ್ಯೂಂ, ಕೆಎಎಸ್ ಅವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 121 ಆಸೇವ 05 ದಿ:19.08.05ರಲ್ಲಿ ಮಡಿಕೇರಿ ಉಪ ವಿಭಾಗಾಧಿಕಾರಿ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿತ್ತು. ಅವರು ಸದರಿ ಹುದ್ದೆಗೆ ಹಾಜರಾಗದೆ ದುರ್ನಡತೆ ಎಸಗಿ ನಡತೆ ನಿಯಮಗಳನ್ನು ಉಲ್ಲಂಘಿಸಿರುವ ಆರೋಪದ ಸಂಬಂಧ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12ರನ್ವಯ ಮೇಲೆ(1)ರಲ್ಲಿ ಓದಲಾದ ನೋಟೀಸ್ ನೀಡಿ ಸಮಜಾಯಿಷಿಯನ್ನು ಕೇಳುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಆರೋಪಿತ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿ:12.06.06ರ ಉತ್ತರ ಸಲ್ಲಿಸಿ ತಮ್ಮ ಪತ್ನಿಯು ಬೆಂಗಳೂರಿನಲ್ಲಿ ಕೆಲಸ ನಿರ್ವಹಿಸುತ್ತಿದ್ದುದರಿಂದ ಹಾಗೂ ತಮಗೆ 2 ಬಾರಿ ಹೃದಯ ಚಿಕಿತ್ಸೆ ಆಗಿರುವುದರಿಂದ ತಮ್ಮ ವರ್ಗಾವಣೆಯನ್ನು ರದ್ದು ಮಾಡಿ ಅದೇ ಜಾಗದಲ್ಲಿ ಮುಂದುವರಿಸುವುದಾಗಲೀ ಅಥವಾ ಬೆಂಗಳೂರಿನಲ್ಲಿ ಬೇರೆ ಯಾವುದಾದರೂ ಹುದ್ದೆಗೆ ನೇಮಕ ಮಾಡಬೇಕೆಂದು ದಿ:22.08.05ರಂದು ವೃಂದ ಪ್ರಾಧಿಕಾರಕ್ಕೆ ಮನವಿ ಮಾಡಿಕೊಂಡಿದ್ದೇನೆಂದು ತಿಳಿಸಿರುತ್ತಾರೆ. ಈ ಮಧ್ಯೆ ತಮ್ಮ ಆರೋಗ್ಯವು ತುಂಬಾ ಕೆಟ್ಟಿದ್ದರಿಂದ ವೈದ್ಯಕೀಯ ಕಾರಣಗಳ ಮೇಲೆ ದಿ:21.11.05 ರಿಂದ 20.12.05 ರವರೆಗೆ ಗಳಿಕೆ ರಜೆ ಹಾಕಿದ್ದು, ಈ ರಜೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಮಂಜೂರು ಮಾಡಿರುವುದಾಗಿ ಹಾಗೂ ಮನೆ ಬಾಡಿಗೆ ಮತ್ತು ವಸತಿ ನಿಯಂತ್ರಣಾಧಿಕಾರಿಯ ಹುದ್ದೆಯಿಂದ ಬಿಡುಗಡೆ ಹೊಂದಿ ಮಡಿಕೇರಿ ಉಪ ವಿಭಾಗಾಧಿಕಾರಿ ಹುದ್ದೆಗೆ ದಿ:20.01.06ರಂದು ಕರ್ತವ್ಯಕ್ಕೆ ಹಾಜರಾಗಿರುತ್ತೇನೆಂದು ತಿಳಿಸಿರುತ್ತಾರೆ. ನಂತರ ಸರ್ಕಾರವು ಮಡಿಕೇರಿ ಉಪ ವಿಭಾಗಾಧಿಕಾರಿ ಹುದ್ದೆಯಿಂದ ವಿಶೇಷ ಭೂಸ್ವಾಧೀನಾಧಿಕಾರಿ, ಬಿ.ಎಂ.ಐ.ಸಿ., ಗಾಂಧಿನಗರ, ಬೆಂಗಳೂರು ಹುದ್ದೆಗೆ ವರ್ಗಾಯಿಸಿದ್ದರಿಂದ ಅಲ್ಲಿಗೆ ಹಾಜರಾಗುವ ಸಂಬಂಧ ದಿ:12.06.06ರಂದು ಬಿಡುಗಡೆ ಹೊಂದಿರುವುದಾಗಿ ತಿಳಿಸಿರುತ್ತಾರೆ. ವರ್ಗಾವಣೆ ಮಾರ್ಗಸೂಚಿಯನ್ವಯ ಪತಿ–ಪತ್ನಿ ಸರ್ಕಾರಿ ನೌಕರಿಯಲ್ಲಿದ್ದು ಸಮೀಪದ ಸ್ಥಳದಲ್ಲಿ ವರ್ಗಾವಣೆ ಮಾಡಿಕೊಳ್ಳಬೇಕೆಂದು ನಿಯಮವಿದ್ದು ಹಾಗೂ ಮಡಿಕೇರಿಯಲ್ಲಿ ಹೃದಯ ರೋಗಕ್ಕೆ ಸಮರ್ಪಕ ವೈದ್ಯಕೀಯ ಚಿಕಿತ್ಸೆಯ ಅನುಕೂಲವಿಲ್ಲದಿದ್ದರಿಂದ ಸರ್ಕಾರಕ್ಕೆ ಮನವಿ ಮತ್ತು ಮೇಲ್ಮನವಿಗಳನ್ನು ಸಲ್ಲಿಸಿ ವರ್ಗಾವಣೆ ಆದೇಶದ ಮಾರ್ಪಾಡಿನ ನಿರೀಕ್ಷೆಯಲ್ಲಿದ್ದುದರಿಂದ ವರ್ಗಾಯಿಸಿದ ಹುದ್ದೆಗೆ ಹಾಜರಾಗಲಿಲ್ಲ. ಹೀಗಾಗಿ ಯಾವ ಕರ್ತವ್ಯಲೋಪವನ್ನು ಎಸಗಿರುವುದಿಲ್ಲವೆಂದು ತಿಳಿಸಿ ತಮ್ಮ ಮೇಲೆ ಹೊರಿಸಿರುವ ಆರೋಪವನ್ನು ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರು ಸಲ್ಲಿಸಿರುವ ಉತ್ತರವನ್ನು ಪರಿಶೀಲಿಸಲಾಗಿ, ಸದರಿ ಅಧಿಕಾರಿಯವರ ಪತ್ನಿಯು ಸರ್ಕಾರಿ ನೌಕರಿಯಲ್ಲಿದ್ದು, ಬೆಂಗಳೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದನ್ನು ಹಾಗೂ ಸದರಿ ಅಧಿಕಾರಿಯವರು ಹೃದಯ ರೋಗಿಯಾಗಿದ್ದು, ಅವರಿಗೆ 2 ಬಾರಿ ಹೃದಯ ಶಸ್ತ್ರಚಿಕಿತ್ಸೆಯಾಗಿರುವುದನ್ನು ಮನಗಂಡ ಸರ್ಕಾರವು ಅವರ ಉತ್ತರವನ್ನು ಒಪ್ಪಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 156 ಎಸ್ಇಎನ್ 05 ಬೆಂಗಳೂರು, ದಿನಾಂಕ:28ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಅಬ್ದುಲ್ ಖಯ್ಯೂಂ, ಕೆಎಎಸ್ (ಕಿರಿಯ ಶ್ರೇಣಿ)ಅಧಿಕಾರಿ ಅವರನ್ನು ದಿನಾಂಕ:29.05.06ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸುತ್ತದೆ. ಹಾಗೂ ಇನ್ನು ಮುಂದೆ ಈ ರೀತಿಯ ಪ್ರಸಂಗಗಳಿಗೆ ಅವಕಾಶ ಉಂಟಾಗದಂತೆ ಕಾರ್ಯನಿರ್ವಹಿಸಲು ಈ ಮೂಲಕ ಎಚ್ಚರಿಕೆ ನೀಡಲಾಗಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

ಪಿ.ಆರ್. 1697

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಿಗೆ ಹೊಸ ವಾಹನವನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**1) ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಅಪ್ರ: ಕಾ.19/ 2006-07 ದಿನಾಂಕ:14.11.2006.

2) ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ರಾಜ್ಯ ಶಿಷ್ಟಾಚಾರ) ಅವರ ಪತ್ರ ಸಂಖ್ಯೆ: ಸಿಆಸುಇ 124 ಶಿವಾನೀ 2006 ದಿನಾಂಕ:19.10.2006.

3) ಅಧಿಸೂಚನೆ ಸಂಖ್ಯೆ: ಸಿಆಸುಇ 62 ಶಿಸಸೇ 2006 ದಿನಾಂಕ:26.06.2006.

**ಪ್ರಸ್ತಾವನೆ:**

ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು ಅವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 14.11.2006ರ ಪತ್ರದಲ್ಲಿ ಪ್ರಾಧಿಕಾರದ ಅಧ್ಯಕ್ಷರು ಹೊಂದಿದ್ದ ವಾಹನ ಸಂಖ್ಯೆ: ಕೆಎ 01 ಜಿಎ 135 ಇದು ಉಪಯೋಗಿಸಲಾಗದ ಸ್ಥಿತಿಯಲ್ಲಿರುವುದರಿಂದ ಇದನ್ನು ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು ನೀಡಿದ ಪ್ರಮಾಣ ಪತ್ರದಂತೆ ನಿಷ್ಪ್ರಯೋಜಕ ವಾಹನವನ್ನು ವಿಲೇವಾರಿ ಮಾಡಬೇಕಾಗಿದ್ದು, ಇದರ ಬದಲಾಗಿ ಹೊಸ ವಾಹನವನ್ನು ನೀಡುವಂತೆ ಸಿ.ಆ.ಸು.ಇಲಾಖೆಯನ್ನು ಕೋರಲಾಗಿ ಸಿ.ಆ.ಸು.ಇಲಾಖೆಯು ಮೇಲೆ (2)ರಲ್ಲಿ ಓದಲಾದ ದಿನಾಂಕ:19.10.2006ರ ಪತ್ರದಲ್ಲಿ ರಾಜ್ಯ ಅತಿಥಿ ಗೃಹದಲ್ಲಿ ವಾಹನಗಳ ಲಭ್ಯತೆ ಇಲ್ಲದಿರುವುದರಿಂದ ಹೊಸ ವಾಹನವನ್ನು ಒದಗಿಸಲು ಸಾಧ್ಯವಿಲ್ಲವೆಂದು ತಿಳಿಸಿರುವುದಾಗಿ ವರದಿ ಮಾಡಿ ಅಧ್ಯಕ್ಷರ ಉಪಯೋಗಕ್ಕಾಗಿ ಹೊಸ ಅಸೆಂಟ್ ಜಿಎಲ್‌ಇ ವಾಹನವನ್ನು ಖರೀದಿಸಲು ಅನುಮತಿ ಕೋರಿದ್ದಾರೆ. ಅಧ್ಯಕ್ಷರು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ:26.06.2006ರ ಅಧಿಸೂಚನೆಯಲ್ಲಿ ಸಂಪುಟ ದರ್ಜೆ ಸಚಿವರ ಸ್ಥಾನಮಾನ ನೀಡಲಾಗಿದೆ. ಆದ್ದರಿಂದ ಅಧ್ಯಕ್ಷರು ಸಂಪುಟ ದರ್ಜೆ ಸಚಿವರು ಹೊಂದಿರುವ ಕಾರನ್ನು ಹೊಂದಲು ಅರ್ಹರಾಗಿದ್ದಾರೆ. ಅವರಿಗೆ ಸದರಿ ವಾಹನವನ್ನು ನೀಡಲು ಸಾಧ್ಯವಿಲ್ಲವೆಂದು ಸಿ.ಆ.ಸು.ಇ (ರಾಜ್ಯ ಶಿಷ್ಟಾಚಾರ)ವು ತಿಳಿಸಿರುವ ಅಂಶವನ್ನು ಪರಿಗಣಿಸಿದ ನಂತರ ಅವರಿಗೆ ಹೊಸ ವಾಹನವನ್ನು ಖರೀದಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 28 ಕೆಎಎಲ್ 2006, ಬೆಂಗಳೂರು, ದಿನಾಂಕ:28ನೇ ನವೆಂಬರ್, 2006**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಉಪಯೋಗಕ್ಕಾಗಿ ಒಂದು ಹೊಸ ಅಸೆಂಟ ಜಿಎಲ್‌ಇ ವಾಹನವನ್ನು ರೂ.6,13,141-00 (ರೂ.ಆರು ಲಕ್ಷದ ಹದಿಮೂರು ಸಾವಿರದ ಒಂದು ನೂರ ನಲವತ್ತೊಂದು ಮಾತ್ರ)ಗಳ ವೆಚ್ಚದಲ್ಲಿ ಖರೀದಿಸಲು ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು ಪ್ರಾಧಿಕಾರದ ಯೋಜನೇತರ ಲೆಕ್ಕಶೀರ್ಷಿಕೆ 2052-00-092-0-09 ಇದರಲ್ಲಿ ಭರಿಸತಕ್ಕದ್ದು. ಆಂತರೀಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: 1098 ಐಎಫ್ (ಎ ಮತ್ತು ಬಿ) 2006 ದಿನಾಂಕ:17.11.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1756

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗವು ನಡೆಸುವ ವಿಚಾರ ಸಂಕೀರಣಕ್ಕೆ ಧನ ಸಹಾಯವನ್ನು ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ರವರ ಪತ್ರಸಂಖ್ಯೆ: ಡಿಎಎಂ/ ಎಸಿಟಿ/ 1/ 51/ 2006-07 ದಿನಾಂಕ:05.09.2006.

**ಪ್ರಸ್ತಾವನೆ:**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ರವರು ಮೇಲೆ ಓದಲಾದ ದಿನಾಂಕ:05.09.2006ರ ಪತ್ರದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗವು "ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ" ಎಂಬ ವಿಚಾರ ಸಂಕೀರಣವನ್ನು 2006ರ ಅಕ್ಟೋಬರ್ ಮಾಹೆಯಲ್ಲಿ ಹಾನಗಲ್‌ನಲ್ಲಿ ನಡೆಸಲಿದ್ದು, ಸದರಿ ವಿಚಾರ ಸಂಕೀರಣಕ್ಕೆ ರೂ.1.00 ಲಕ್ಷವಾಗುವ ಕಾರಣ ಈ ವೆಚ್ಚದಲ್ಲಿ ರೂ.25 ಸಾವಿರಗಳನ್ನು ಇಲಾಖಾ ವತಿಯಿಂದ ಧನ ಸಹಾಯವನ್ನಾಗಿ ನೀಡಲು ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 210 ಕೆಎಂಯು 2006, ಬೆಂಗಳೂರು, ದಿನಾಂಕ:25ನೇ ನವೆಂಬರ್, 2006**

ಸರ್ಕಾರವು ಹಂಪಿ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗವು 2006ರ ಅಕ್ಟೋಬರ್‌ನಲ್ಲಿ ಕೈಗೊಂಡಿರುವ "ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ" ಎಂಬ ವಿಚಾರ ಸಂಕೀರಣ ವೆಚ್ಚಕ್ಕಾಗಿ ರೂ.25 ಸಾವಿರಗಳನ್ನು ವೆಚ್ಚದ ವಿವರವಾದ ಅಂತಿಮ ಪಟ್ಟಿ ಪಡೆಯುವ ನಿಬಂಧನೆಗೊಳಪಟ್ಟು ಪೇಯಿಸ ರಸೀಟ್ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಮೈಸೂರು ರವರಿಗೆ ಈ ಮೂಲಕ ಮಂಜೂರಾತಿ ನೀಡಿದೆ. ಈ ಬಗೆಗಿನ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕಶೀರ್ಷಿಕೆ 2205-00-103-0-01 (ಯೋಜನೇತರ) 059 ಇವರ ಖರ್ಚಿನ ಸಂಭವನೀಯ ಉಳಿತಾಯದಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರೀಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ಇಡಿ 992 ಐಎಫ್ (ಬಿಎ) 2006 ದಿನಾಂಕ:06.10.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಅನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1757

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 65 ಎಸ್ಇಎನ್ 95 ದಿ:12.04.96.

2) ವಿಭಾಗಾಧಿಕಾರಿ, ಬೆಂಗಳೂರು ವಿಭಾಗ, ಬೆಂಗಳೂರು ಅವರ ದಿ:21.10.97ರ ವಿಚಾರಣಾ ವರದಿ.

3) 2ನೇ ನೋಟೀಸ್ ಸಂಖ್ಯೆ:ಸಿಆಸುಇ 65 ಎಸ್ಇಎನ್ 95 ದಿ:14.07.04.

4) ಶ್ರೀ ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿ:08.09.04ರ ಉತ್ತರ.
5) ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 65 ಎಸ್‌ಇಎನ್ 95 ದಿ:01.06.06.
6) ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಅವರ ಪತ್ರ ಸಂಖ್ಯೆ:ಪಿಎಸ್‌ಸಿ/50/ಸಿಎನ್‌ಎಸ್/2006 ದಿ:01.07.06.

**ಪ್ರಸ್ತಾವನೆ:**

ಶ್ರೀ ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ಉಪ ವಿಭಾಗದ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಗುಡಿಬಂಡೇ ತಾಲ್ಲೂಕು, ಚೌಟಕುಂಟನಹಳ್ಳಿ ಗ್ರಾಮದ ಸ.ನಂ.53ರಲ್ಲಿ ಸರ್ಕಾರಕ್ಕೆ ಸೇರಿದ 4 ಎಕರೆ ಜಮೀನನ್ನು ಸ್ಥಳ ತಪಾಸಣೆ ಮಾಡದೆ ಹಾಗೂ ತನ್ನ ವ್ಯಾಪ್ತಿಯಲ್ಲಿ ಬರುತ್ತದೆಯೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸದೆ ತನ್ನ ಅಧಿಕಾರ ವ್ಯಾಪ್ತಿಯನ್ನು ಮೀರಿ ಸರ್ವೇ ನಂಬರ್ ಬದಲಾವಣೆಗೆ ಅನುಮತಿ ನೀಡಿ ದುರ್ನಡತೆ ಎಸಗಿದ ಆರೋಪಗಳಿಗಾಗಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಮೇಲೆ (1)ರಲ್ಲಿ ಓದಲಾದ ದಿ:12.04.96ರ ಸರ್ಕಾರಿ ಆದೇಶದಲ್ಲಿ ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿ:21.10.97ರ ವಿಚಾರಣಾ ವರದಿ ಸಲ್ಲಿಸಿ ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ.

ಶ್ರೀ ಈರಪ್ಪ, ಕೆಎಎಸ್ ಅಧಿಕಾರಿ ಅವರು ಚಿಕ್ಕಬಳ್ಳಾಪುರ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಆದಿನಾರಾಯಣಪ್ಪ ಎಂಬುವರ ಅನುಭವದಲ್ಲಿದ್ದ 4 ಎಕರೆ ಜಮೀನು ಚೌಟಕುಂಟನಹಳ್ಳಿ ಗ್ರಾಮದ ಸ.ನಂ.52ಕ್ಕೆ ಬದಲಾಗಿ 53ರಲ್ಲಿ ಈ ರೀತಿ ತಿದ್ದುಪಡಿ ಮಾಡುವಂತೆ ಆರೋಪಿಗೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಕಳುಹಿಸಿದ ಗುಡಿಬಂಡೇ ತಾಲ್ಲೂಕು ತಹಶೀಲ್ದಾರರು ಆದೇಶ ಕ್ರಮಾಂಕ:ಆರ್‌ಡಿ 100 ಎಲ್‌ಪಿಜಿ 99 ದಿ:27.01.92ರನ್ವಯ ಜಿಲ್ಲಾಧಿಕಾರಿಗಳ ಹಂತದಲ್ಲಿ ಸರ್ಕಾರದ ಪೂರ್ವಾನುಮತಿಯನ್ನು ಮಾಡಬೇಕು ಎಂಬ ಅಂಶವನ್ನು ತಿಳಿಸಲಿಲ್ಲ ಎಂಬುದು ನಿಜವಿದ್ದರೂ ಸಹ ಇಂತಹ ಮುಖ್ಯವಾದ ವಿಚಾರದಲ್ಲಿ ನಿಯಮದ ಅರಿವಿಲ್ಲದಿರುವುದು ಕ್ಷಮೆಗೆ ಅರ್ಹವಲ್ಲ. ಸರ್ವೇ ನಂಬರ್ ಬದಲಾವಣೆ ಮಾಡುವ ಅಧಿಕಾರ ಕೇವಲ ಜಿಲ್ಲಾಧಿಕಾರಿ/ಸರ್ಕಾರಕ್ಕೆ ಮಾತ್ರ ಅಧಿಕಾರವಿರುತ್ತದೆ. ತಹಶೀಲ್ದಾರರು ಈ ಜಮೀನು ಕೆರೆಯಂಗಳವೆಂದು ಸ್ಪಷ್ಟವಾಗಿ ತಿಳಿಸಿರುತ್ತಾರೆ. ಸ.ನಂ.53ರ ಜಮೀನು ಸರ್ಕಾರಿ ಕೆರೆ ಮತ್ತು ಕಾಯ್ದಿಟ್ಟ ಅರಣ್ಯ ಎಂದು ಪಹಣಿಯಲ್ಲಿ ನಮೂದಿಸಲಾಗಿರುತ್ತದೆ. ಪ್ರಶ್ನಿತ ಜಮೀನು ಕಲ್ಲುಬಂಡೆ ನಿಕ್ಷೇಪದಿಂದ ಕೂಡಿರುತ್ತದೆ. ಅಲ್ಲದೆ ದಿ:16.06.94ರ ರಾಜಸ್ವ ನಿರೀಕ್ಷಕರ ವರದಿಯನ್ನೂ ಸಹ ಪ್ರಶ್ನಿತ ಜಮೀನು ಕಲ್ಲುಬಂಡೆ ನಿಕ್ಷೇಪದಿಂದ ಕೂಡಿರುತ್ತದೆಯೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. ಕೆರೆಯಂಗಳದ ಜಮೀನುಗಳನ್ನು ಬೇಸಾಯಕ್ಕಾಗಿ ಮಂಜೂರು ಮಾಡಲು ಅವಕಾಶವಿಲ್ಲವೆಂದು ಸರ್ಕಾರದ ಸ್ಪಷ್ಟ ಸೂಚನೆಗಳು ಇದ್ದರೂ ಸಹ ಅಲ್ಲದೆ ಬಂಡೆ ನಿಕ್ಷೇಪವಿರುವ ಹಾಗೂ ಪಹಣಿಯಲ್ಲಿ ಕಾಯ್ದಿಟ್ಟ ಅರಣ್ಯ ಪ್ರದೇಶವನ್ನು ನಮೂದಿಸಿರುವ ಜಮೀನನ್ನು ಮಂಜೂರು ಮಾಡಲು ರಹಾ ಇರುವುದಿಲ್ಲ. ಈ ಕಾರಣಗಳಿಂದ ಚೌಟಕುಂಟನಹಳ್ಳಿ ಗ್ರಾಮದ ಸ.ನಂ.53ರ ಜಮೀನನ್ನು ಶ್ರೀ ಆದಿನಾರಾಯಣಪ್ಪ ರವರಿಗೆ ಮಂಜೂರು ಮಾಡುವ ವಿಚಾರದಲ್ಲಿ ಇದು ಆರೋಪಿಯು ತನ್ನ ಅಧಿಕಾರದಲ್ಲಿ ಕರ್ತವ್ಯ ಲೋಪ ಎಸಗಿರುವುದು ಕಂಡು ಬರುತ್ತದೆಯೆಂದು ನಿರ್ಣಯ ನೀಡಿರುತ್ತಾರೆ. ಹೀಗಾಗಿ ಅವರ ಮೇಲೆ ಹೊರಿಸಲಾದ 2 ಆರೋಪಗಳು ಸಾಬೀತಾಗಿವೆ.

ಮೇಲೆ ಉಲ್ಲೇಖಿಸಿದ ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು. ವಿಚಾರಣೆ ಸಮರ್ಪಕವಾಗಿ ನಡೆದಿರುವುದು ಕಂಡು ಬಂದ ಕಾರಣ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿ:14.07.04ರ 2ನೇ ನೋಟೀಸ್ ನೀಡಿ ಈ ಬಗ್ಗೆ ಏನಾದರು ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸಿಗೆ ಆರೋಪಿತ ನಿವೃತ್ತ ಅಧಿಕಾರಿಯವರು ಮೇಲೆ (4)ರಲ್ಲಿ ಓದಲಾದ ದಿ:08.09.04ರ ಉತ್ತರ ಸಲ್ಲಿಸಿ, ಸರ್ವೇ ನಂಬರನ್ನು ಬದಲಾಯಿಸಲು ಸಂಬಂಧಿಸಿದ ತಹಶೀಲ್ದಾರ್‌ರಿಂದ ಪ್ರಸ್ತಾವನೆ ಬಂದಿದ್ದು, ಅದರಂತೆ ಕ್ರಮ ಕೈಗೊಳ್ಳಲಾಗಿದೆಯೆಂದು, ತಹಶೀಲ್ದಾರ್‌ರವರ ವರದಿಯಲ್ಲಿ ಸದರಿ ಭೂಮಿಯು ಕೆರೆಯಂಗಳದ ಮೇಲು ಭಾಗದಲ್ಲಿದ್ದು, ಅಲ್ಲಿ ನೀರು ನಿಲ್ಲುವ ಸ್ಥಳವಲ್ಲವೆಂದು ವರದಿ ಮಾಡಿದ್ದು, ಪ್ರಶ್ನಿತ ಜಮೀನಿಗೆ ಸಂಬಂಧಿಸಿದಂತೆ ಸರ್ವೇ ನಂಬರ್ ಬದಲಾವಣೆಯನ್ನು ತಾವು ದಿ:04.07.94ರಂದು ಬದಲಾವಣೆಗೆ ಆದೇಶಿಸಿದ್ದು, ಸದರಿ ಜಮೀನನ್ನು ದಿ:20.07.94ರ ಅಧಿಸೂಚನೆಯಡಿಯಲ್ಲಿ ಅರಣ್ಯ ಭೂಮಿಯಡಿಯಲ್ಲಿ ತರಲಾಗಿರುತ್ತದೆಯೆಂದು ತಿಳಿಸಿ ತಹಶೀಲ್ದಾರ್‌ರ ವರದಿಯನ್ನಾಧರಿಸಿ ತಾವು ಮಾಡಿರುವ ಆದೇಶವನ್ನು ಜಿಲ್ಲಾಧಿಕಾರಿಗಳು ರದ್ದುಗೊಳಿಸಿರುತ್ತಾರೆ. ಸದರಿ ಸರ್ವೇ ನಂಬರ್ ಬದಲಾವಣೆಗೆ ತಾವು ಆದೇಶಿಸಿದ್ದೇನೆಯೇ ಹೊರತು ತದನಂತರ ಸದರಿ ಜಮೀನನ್ನು ಬೇರೆ ಯಾವುದೇ ಉದ್ದೇಶಗಳಿಗೆ ಮಂಜೂರು ಮಾಡುವ ಬಗ್ಗೆ ತಾವು ಯಾವುದೇ ಆದೇಶ ಮಾಡಿಲ್ಲವೆಂದು, ಅದನ್ನು ತಹಶೀಲ್ದಾರ್‌ರೇ ಸ್ಥಳೀಯವಾಗಿ ಕ್ರಮಕೈಗೊಂಡಿರುತ್ತಾರೆಂದು ತಿಳಿಸಿ, ಪೂರ್ವ ನಿರ್ಧರಿತವಾಗಿ ವಿಚಾರಣೆಯನ್ನು ವಿಚಾರಣಾಧಿಕಾರಿಯವರು ನಡೆಸಿರುವರೆಂದೂ ಈ ವಿಚಾರಣೆಯು ಸಹಜ ನ್ಯಾಯ ತತ್ವಕ್ಕೆ ವಿರುದ್ಧವಾಗಿ ನಡೆದಿದೆಯೆಂದೂ ತಿಳಿಸಿ ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಒಪ್ಪಿಕೊಳ್ಳದೆ ತಮ್ಮನ್ನು ಆರೋಪಮುಕ್ತರನ್ನಾಗಿಸಲು ಕೋರಿದ್ದಾರೆ.

ಆರೋಪಿತ ನಿವೃತ್ತ ಅಧಿಕಾರಿಯ ಉತ್ತರವನ್ನು ದಾಖಲೆಗಳೊಡನೆ ಪರಿಶೀಲಿಸಲಾಗಿ, ಜಮೀನೊಂದರ ಸರ್ವೇ ನಂಬರನ್ನು ಸರ್ಕಾರಿ ಆದೇಶ ಸಂ:ಆರ್‌ಡಿ 100 ಎಲ್‌ಪಿಜಿ 89 ದಿ:27.01.92ರಂತೆ ಬದಲಾವಣೆ ಮಾಡುವ ಅಧಿಕಾರ ಜಿಲ್ಲಾಧಿಕಾರಿ/ಸರ್ಕಾರಕ್ಕೆ ಇದ್ದರೂ ಸಹ ಆರೋಪಿತರು ಏಕಪಕ್ಷೀಯವಾಗಿ ಸರ್ಕಾರದ/ಜಿಲ್ಲಾಧಿಕಾರಿಗಳ ಅನುಮತಿ ಇಲ್ಲದೆ ಸರ್ವೇ ನಂಬರ್ ಬದಲಾವಣೆ ಮಾಡಿರುವುದು ಹಾಗೂ ಕೆರೆಯಂಗಳದ ಜಮೀನುಗಳನ್ನು ಬೇಸಾಯಕ್ಕಾಗಿ ಮಂಜೂರು ಮಾಡಲು ಅವಕಾಶವಿಲ್ಲದಿದ್ದರೂ ಮತ್ತು ಕಲ್ಲುಬಂಡೆ ನಿಕ್ಷೇಪವಿರುವ ಜಮೀನು ಪಹಣಿಯಲ್ಲಿ ಕಾಯ್ದಿಟ್ಟ ಅರಣ್ಯವೆಂದು ನಮೂದಿಸಿರುವ ಜಮೀನು ಖಾಸಗಿಯವರ ಪಾಲಾಗಲು ಕಾರಣರಾಗಿರುತ್ತಾರೆ. ಆರೋಪಿತರಿಗೆ ಮುಖ್ಯವಾದ ವಿಚಾರದಲ್ಲಿ ನಿಯಮದ ಅರಿವಿಲ್ಲದಿರುವುದು ಕ್ಷಮೆಗೆ ಅರ್ಹವಲ್ಲ. ಹೀಗಾಗಿ ಆರೋಪಿತರ ಕ್ರಮವು ಅವರ ಅಧಿಕಾರ ವ್ಯಾಪ್ತಿಯನ್ನು ಮೀರಿರುವುದು ಸ್ಪಷ್ಟವಾಗಿ ದೃಢಪಡುತ್ತದೆ. ಹೀಗಾಗಿ ಅವರು ವಿಚಾರಣಾ ವರದಿಯನ್ನು ಔಪಚಾರಿಕವಾಗಿ ವಿರೋಧಿಸುತ್ತಿದ್ದಾರೆಂದು ಪರಿಗಣಿಸಲಾಗಿದೆ. ಈ ಅಂಶಗಳ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಯವರು ಪಡೆಯುತ್ತಿರುವ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಪ್ರತಿ ತಿಂಗಳು ರೂ.500/-ಗಳನ್ನು 3 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸುವ ಸರ್ಕಾರದ ಪ್ರಸ್ತಾವನೆಗೆ ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಅದಕ್ಕೆ ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ (6)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಅಧಿಕಾರಿಯವರ

ಮಾಸಿಕ ವಿಶ್ರಾಂತಿ ವೇತನದಿಂದ ರೂ.1,000/-ಗಳನ್ನು 5 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸುವಂತೆ ಅಭಿಪ್ರಾಯ ನೀಡಿರುತ್ತದೆ.

ಕರ್ನಾಟಕ ಲೋಕ ಸೇವಾ ಆಯೋಗವು ಸರ್ಕಾರದ ಪ್ರಸ್ತಾವನೆಗೆ ವ್ಯತಿರಿಕ್ತವಾಗಿ ಯಾವುದೇ ಅಂಶಗಳನ್ನು ತಿಳಿಸಿರುವುದಿಲ್ಲ. ಆದರೆ, ಕೂಲಂಕಷವಾಗಿ ಪರಿಶೀಲಿಸಿದೆ ಎಂದು ಮಾತ್ರ ತಿಳಿಸಿರುವುದು ಕಂಡು ಬರುತ್ತದೆ. ಸದರಿ ಭೂಮಿಯು ಕೆರೆಯಂಗಳದ ಮೇಲು ಭಾಗದಲ್ಲಿ ಇದೆಯೆಂದು ತಹಶೀಲ್ದಾರ್‌ರವರ ವರದಿಯಿಂದ ತಿಳಿದು ಬರುತ್ತದೆ. ಅಲ್ಲಿ ನೀರು ನಿಲ್ಲುವ ಸ್ಥಳವಲ್ಲವೆಂದು ವರದಿ ಮಾಡಲಾಗಿರುತ್ತದೆ. ಆರೋಪಿತರು ಪ್ರಶ್ನಿತ ಜಮೀನಿಗೆ ಸಂಬಂಧಿಸಿದಂತೆ ಸರ್ವೇ ನಂಬರ್ ಬದಲಾವಣೆಯನ್ನು ದಿ:04.07.94 ರಂದು ಬದಲಾವಣೆಗೆ ಆದೇಶಿಸಿರುತ್ತಾರೆ. ಸದರಿ ಜಮೀನನ್ನು ದಿ:20.07.94ರ ಅಧಿಸೂಚನೆಯಡಿಯಲ್ಲಿ ಅರಣ್ಯ ಭೂಮಿಯಡಿಯಲ್ಲಿ ತರಲಾಗಿರುತ್ತದೆಯೆಂದು ತಿಳಿಸಿ ತಹಶೀಲ್ದಾರ್‌ರವರ ವರದಿಯನ್ನಾಧರಿಸಿ ಆರೋಪಿತರು ಮಾಡಿರುವ ಆದೇಶವನ್ನು ಜಿಲ್ಲಾಧಿಕಾರಿಗಳು ರದ್ದುಪಡಿಸಿರುತ್ತಾರೆ. ಅವರು ಸದರಿ ಸರ್ವೇ ನಂಬರ್ ಬದಲಾವಣೆಗೆ ಆದೇಶಿಸಿದ್ದಾರೆಯೇ ಹೊರತು ತದನಂತರ ಅದನ್ನು ಬೇರೆ ಯಾವುದೇ ಉದ್ದೇಶಗಳಿಗೆ ಮಂಜೂರು ಮಾಡುವ ಬಗ್ಗೆ ಅವರು ಯಾವುದೇ ಆದೇಶ ಮಾಡಿರುವುದಿಲ್ಲ. ಅದನ್ನು ತಹಶೀಲ್ದಾರ್‌ರೇ ಸ್ಥಳೀಯವಾಗಿ ಕ್ರಮಕೈಗೊಂಡಿರುತ್ತಾರೆ. ಆದರೆ, ಜಮೀನೊಂದರ ಸರ್ವೇ ನಂಬರನ್ನು ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 100 ಎಲ್‌ಪಿಜಿ 89 ದಿ:27.10.92ರಂತೆ ಬದಲಾವಣೆ ಮಾಡುವ ಅಧಿಕಾರ ಜಿಲ್ಲಾಧಿಕಾರಿ/ಸರ್ಕಾರಕ್ಕೆ ಇದ್ದರೂ ಸಹ ಆರೋಪಿತರು ಏಕಪಕ್ಷೀಯವಾಗಿ ಸರ್ಕಾರದ/ಜಿಲ್ಲಾಧಿಕಾರಿಗಳ ಅನುಮತಿ ಇಲ್ಲದೇ ಸರ್ವೇ ನಂಬರ್ ಬದಲಾವಣೆ ಮಾಡಿರುವುದು ಹಾಗೂ ಕೆರೆಯಂಗಳದ ಜಮೀನುಗಳನ್ನು ಬೇಸಾಯಕ್ಕಾಗಿ ಮಂಜೂರು ಮಾಡಲು ಅವಕಾಶವಿಲ್ಲದಿದ್ದರೂ ಮತ್ತು ಕಲ್ಲುಬಂಡೆ ನಿಕ್ಷೇಪವಿರುವ ಜಮೀನು ಪಹಣಿಯಲ್ಲಿ ಕಾಯ್ದಿಟ್ಟ ಅರಣ್ಯವೆಂದು ನಮೂದಿಸಿರುವ ಜಮೀನು ಬೇರೆಯವರ ಪಾಲಾಗಲು ಕಾರಣರಾಗಿರುವುದನ್ನು ಗಮನಿಸಿ, ಶ್ರೀ ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ರೂ.1,000/-ಗಳನ್ನು 5 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಬೇಕೆಂದು ಕರ್ನಾಟಕ ಲೋಕ ಸೇವಾ ಆಯೋಗವು ನೀಡಿರುವ ಸಹಮತಿಯು ಅಪಾದಿತರ ದುರ್ನಡತೆಗೆ ಅಸಮ ಪ್ರಮಾಣದಲ್ಲಿರುವುದನ್ನು ಮನಗಂಡು ಅದರ ಬದಲಾಗಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ ರೂ.500/-ಗಳನ್ನು 3 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 65 ಎಸ್‌ಇಎನ್ 95 ಬೆಂಗಳೂರು, ದಿನಾಂಕ:1ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಈರಪ್ಪ, ನಿವೃತ್ತ ಕೆಎಎಸ್ ಅಧಿಕಾರಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ ರೂ.500/-ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 3 ವರ್ಷದ ಅವಧಿಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್. 1742

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆಯ ಶಾಖೆಯ ಶಾಖಾಧಿಕಾರಿಯ ಹುದ್ದೆಯನ್ನು ಪೀಠಾಧಿಕಾರಿಯಾಗಿ ಪದನಾಮಕರಿಸಿ ಅವರನ್ನು ಆ ಶಾಖೆಯ ಮಾಹಿತಿ ಅಧಿಕಾರಿ ಎಂದು ನೇಮಿಸುವ ಕುರಿತು.

**ಉಲ್ಲೇಖ:** 1) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಇವರ ಟಿಪ್ಪಣಿ ಸಂಖ್ಯೆ: ಸಿಆಸುಇ 42 ಪ್ರಕಾ (ಆಸು) 2006, ದಿನಾಂಕ:02.12.2006.

**ಪ್ರಸ್ತಾವನೆ:**

ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ 2005ರ ನಿರ್ವಹಣೆಯನ್ನು ಈ ಹಿಂದೆ ಜನಸ್ಪಂದನ ವಿಭಾಗವು ನಿರ್ವಹಿಸುತ್ತಿದ್ದು, ಸದರಿ ವಿಷಯವನ್ನು ಇತ್ತೀಚೆಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಆಡಳಿತ ಸುಧಾರಣೆ) ಇಲಾಖೆಗೆ ವರ್ಗಾಯಿಸಲಾಗಿದೆ. ಈ ಶಾಖೆಗೆ ಶಾಖಾಧಿಕಾರಿಯನ್ನಾಗಿ, ಶ್ರೀ ಬಿ. ಶಿವರುದ್ರಸ್ವಾಮಿ, ಇವರನ್ನು ನೇಮಿಸಲಾಗಿದೆ. ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ ಶಾಖೆಯ ಕಾರ್ಯಭಾರವನ್ನು ಸಮರ್ಪಕವಾಗಿ ನಿರ್ವಹಿಸುವ ದೃಷ್ಠಿಯಿಂದ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 49 ಇಸಪ 2006, ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಬಿ. ಶಿವರುದ್ರಸ್ವಾಮಿ, ಶಾಖಾಧಿಕಾರಿ, ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ ಶಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಇವರ ಹುದ್ದೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ 'ಶಾಖಾಧಿಕಾರಿಯ' ಬದಲಾಗಿ 'ಪೀಠಾಧಿಕಾರಿ' ಎಂದು ಪದನಾಮೀಕರಿಸಿದೆ ಹಾಗೂ ಇವರನ್ನು ಸದರಿ ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ ಶಾಖೆಯ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ. ಪೀಠಾಧಿಕಾರಿಗಳು ಕಡತಗಳನ್ನು ನೇರವಾಗಿ ಉಪಕಾರ್ಯದರ್ಶಿಗಳಿಗೆ ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಹಿರೇಮಠ**

ಪಿ.ಆರ್. 1758

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ-2).